

ಕರ್ನಾಟಕ ಸರಕಾರ

# ತಿಳಿ ಕನ್ನಡ

## ದ್ವಿತೀಯ ಭಾಷಾ ಕನ್ನಡ ಪಠ್ಯಪುಸ್ತಕ






## ಐದನೆಯ ತರಗತಿ

### ಮೊದಲನೆಯ ಮತ್ತು ಎರಡನೆಯ ಸೆಮಿಸ್ಟರ್

೨೦೧೫


ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)

೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ ೩ನೇ ಹಂತ,

ಬೆಂಗಳೂರು – ೫೬೦೦೮೫.

# ಪಠ್ಯಪುಸ್ತಕ ರಚನಾ ಸಮಿತಿ

*ಅಧ್ಯಕ್ಷರು*

**ಶ್ರೀ ರಾಮಣ್ಣಹವಳೆ,** ನಿವೃತ್ತ ಶಿಕ್ಷಕರು, 'ಸೌಜನ್ಯಶ್ರೀ' ನೀಲಕಂಠೇಶ್ವರ ನಗರ, ರಾಯಚೂರು.

*ಸದಸ್ಯರು:*

೧. **ಶ್ರೀಮತಿ ಲಲಿತಾ, ವೈ.ಎನ್.** ಸಹ ಶಿಕ್ಷಕರು, ಸ ಕಿ ಪ್ರಾ ಶಾಲೆ, ಕಾಟಿಕೆರೆ ಕ್ಯಾಂಪ್, ಶಿವಮೊಗ್ಗ ತಾ||.

೨. **ಶ್ರೀಮತಿ ಪರಿಮಳಾ, ವಿ. ಜಾಲಿಹಾಳ,** ಸ.ಶಿ., ಸರಕಾರಿ ಪ್ರೌಢ ಶಾಲೆ, ಗಾಜಗಾರ ಪೇಟೆ, ರಾಯಚೂರು.

೩. **ಶ್ರೀ ಲಕ್ಷ್ಮಣ ಲೋಕರೆ,** ಅಧ್ಯಾಪಕರು, ಬಾಲಕಿಯರ ಸರಕಾರಿ ಪ್ರೌಢ ಶಾಲೆ, ರಾಯಚೂರು.

೪. **ಶ್ರೀಮತಿ ರಾಜೇಶ್ವರಿ,** ಕ್ಷೇತ್ರ ಸಂಪನ್ಮೂಲವ್ಯಕ್ತಿ, ಬಿ.ಆರ್.ಪಿ. ಬೆಂಗಳೂರು ದಕ್ಷಿಣ ವಲಯ – ೦೧.

೫. **ಶ್ರೀ ಸೋಮಶೇಖರ ಬಾಬು ಹಲಸಗಿ,** ಕ್ಷೇತ್ರ ಸಂಪನ್ಮೂಲವ್ಯಕ್ತಿ, ಬೈಲಹೊಂಗಲ ತಾ||, ಬೆಳಗಾವಿ ಜಿಲ್ಲೆ.

೬. **ಶ್ರೀ ಪಿ.ಎ.ಬಿ. ಈಶ್ವರ್,** ಚಿತ್ರಕಲಾ ಶಿಕ್ಷಕರು, ಹಮ್ದರ್ದ ಪ್ರೌಢ ಶಾಲೆ, ರಾಯಚೂರು.

ಪರಿಶೀಲಕರು

**ಡಾ. ಎಸ್.ಪಿ. ಪದ್ಮಿನಿ,** ಕನ್ನಡ ಉಪನ್ಯಾಸಕರು, ಗುಪ್ತಾ ಕಾಲೇಜು, ಬನಶಂಕರಿ ೩ನೇ ಹಂತ, ಬೆಂಗಳೂರು.

*ಸಂಪಾದಕ ಮಂಡಳಿ ಸದಸ್ಯರು*

೧. **ಪ್ರೊ|| ಸಾ.ಶಿ. ಮರುಳಯ್ಯ,** ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು.

೨. **ಪ್ರೊ|| ಅ.ರಾ.ಮಿತ್ರ,** ಸಾಹಿತಿಗಳು, ಕೆ.ಎಚ್.ಬಿ. ಕಾಲೋನಿ, ಯಲಹಂಕ, ಬೆಂಗಳೂರು.

೩. **ಡಾ|| ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಾಪುರ.

*ಮುಖ್ಯ ಸಂಯೋಜಕರು*

**ಪ್ರೊ|| ಜಿ. ಎಸ್. ಮುಡಂಬಡಿತ್ತಾಯ,** ಪಠ್ಯಕ್ರಮ ಪರಿಷ್ಕರಣೆ ಮತ್ತು ಪಠ್ಯಪುಸ್ತಕ ರಚನೆ,
ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

*ಸಲಹೆ ಮತ್ತು ಮಾರ್ಗದರ್ಶನ*

೧. **ಶ್ರೀ ನಾಗೇಂದ್ರ ಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

೨. **ಶ್ರೀ ಪಾಂಡುರಂಗ,** ಉಪನಿರ್ದೇಶಕರು (ಪ್ರಭಾರಿ), ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

*ಕಾರ್ಯಕ್ರಮ ಸಂಯೋಜಕರು :*

**ಶ್ರೀ ಪಾಂಡುರಂಗ, ಹಿರಿಯ ಸಹಾಯಕ ನಿರ್ದೇಶಕರು,** ಕರ್ನಾಟಕ ಪಠ್ಯ ಪುಸ್ತಕ ಸಂಘ, ಬೆಂಗಳೂರು.

ಡಿ.ಟಿ.ಪಿ/ವಿನ್ಯಾಸ : ಶ್ರೀ ಸುಬ್ರಮಣ್ಯೇಶ್ವರ ಬುಕ್ ಡಿಪೋ, ಬೆಂಗಳೂರು-2

# ಮುನ್ನುಡಿ

೨೦೦೫ರ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿಗೆ ಅನುಗುಣವಾಗಿ ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೦ ನೇ ಸಾಲಿನಿಂದ ಒಂದನೆಯ ತರಗತಿಯಿಂದ ಹತ್ತನೆಯ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು ಹನ್ನೊಂದು ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಏಳು ಮಾಧ್ಯಮಗಳಲ್ಲಿ ಕೋರ್ ವಿಷಯಗಳನ್ನು ರಚನೆ ಮಾಡಲಾಗುತ್ತಿದೆ. ೧ ರಿಂದ ೪ ನೆಯ ತರಗತಿಯವರೆಗೆ ಪರಿಸರ ವಿಜ್ಞಾನ ಮತ್ತು ೫ ರಿಂದ ೧೦ ನೆಯ ತರಗತಿಯವರೆಗೆ ಐಚ್ಛಿಕ ವಿಷಯಗಳಾದ ಗಣಿತ ವಿಜ್ಞಾನ ಮತ್ತು ಸಮಾಜ ವಿಜ್ಞಾನ ವಿಷಯಗಳಿರುತ್ತವೆ.

**೨೦೦೫ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.**

- ಕಲಿಕೆಯನ್ನು ಜೀವನದ ಆವಶ್ಯಕತೆಗಳೊಂದಿಗೆ ಜೋಡಿಸುವುದು.
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು.
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು.
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಆವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು
- ವಿಷಯಗಳ ಮೇರೆಗಳನ್ನು ಮುರಿದು ಅವುಗಳ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು
- ಶಾಲೆಯ ಹೊರಗಿನ ಬದುಕಿಗೆ ಜ್ಞಾನ ಸಂಯೋಜನೆ.
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.



ನೂತನ ಪಠ್ಯಪುಸ್ತಕಗಳನ್ನು ಕೆಳಗಿನ ಮೂಲಭೂತ ವಿಧಾನಗಳ ಆಧಾರದ ಮೇಲೆ ರಚಿಸಲಾಗಿದೆ. * ಅಂತರ್ಗತ ವಿಧಾನ (Integrated Approach), * ರಚನಾತ್ಮಕ ವಿಧಾನ (Constructive Approach) ಹಾಗೂ * ಸುರುಳಿಯಾಕಾರದ ವಿಧಾನ (Spiral Approach) .

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಆವಶ್ಯಕ ಭಾರತೀಯ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾಪೂರಕ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು ನೀಡಲಾಗಿದೆ. ಈ ಕೌಶಲಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆ ಹಾಗೂ ಮಕ್ಕಳ ಅಭ್ಯಾಸ ಪುಸ್ತಕಗಳಲ್ಲಿ ಅನೇಕ ಚಟುವಟಿಕೆಗಳನ್ನು ಮಕ್ಕಳಿಂದ ಮಾಡಿಸಿ ಅವರಲ್ಲಿ ಸಂಬಂಧಪಟ್ಟ ಸಾಮರ್ಥ್ಯ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗು ಸಂವಹನ ಕೌಶಲ್ಯಗಳ ಸಂವರ್ಧನೆಯೇ ಕಲಿಕೆಯ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ಮಕ್ಕಳಲ್ಲಿ ವೃದ್ಧಿಮಾಡುತ್ತದೆ. ಪ್ರತಿ ಘಟಕದಲ್ಲಿಯೂ ಕೆಲವು ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಜೋಡಿಸಲಾಗಿದೆ. ಅವುಗಳನ್ನು ಮಕ್ಕಳೇ ಕಂಡುಹಿಡಿದು, ಚರ್ಚಿಸಿ ಜೀವನದಲ್ಲಿ ಅವುಗಳ ಅರಿವನ್ನುಂಟುಮಾಡಿಕೊಳ್ಳುವಂತೆ ಮಾಡಬೇಕು.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಯಲ್ಲಿ ಸಹಕರಸಿದ ಸಮಿತಿಯ ಅಧ್ಯಕ್ಷ ರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ ಹಾಗೂ ಸಂಪಾದಕ ಮಂಡಳಿಯ ಸದಸ್ಯರಿಗೆ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕವಿಗಳ ಹಾಗೂ ಸಾಹಿತಿಗಳ ಕೃತಿಗಳನ್ನು ಈ ಪಠ್ಯಪುಸ್ತಕದಲ್ಲಿ ಅಳವಡಿಸಲಾಗಿದೆ. ಇದಕ್ಕೆ ಒಪ್ಪಿಗೆಯನ್ನು ನೀಡಿರುವ ಕವಿಗಳಿಗೆ ಹಾಗೂ ಸಾಹಿತಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಗಿದೆ.



**ಪ್ರೊ॥ ಜಿ. ಎಸ್. ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯಪುಸ್ತಕ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ
ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

**ನಾಗೇಂದ್ರ ಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ
ಬೆಂಗಳೂರು

# ಸಮಕ್ಷಮ

ಭಾರತ ಸರ್ಕಾರ ೨೦೦೫ರಲ್ಲಿ ನೀಡಿದ ರಾಷ್ಟ್ರೀಯ ಶಾಲಾ ಪಠ್ಯಕ್ರಮ ಚೌಕಟ್ಟಿನ ಅನ್ವಯ ಕರ್ನಾಟಕ ಸರ್ಕಾರವು ಸಹ ಪಠ್ಯಸಮಷ್ಟಿಯನ್ನು ಕೇಂದ್ರಸರ್ಕಾರದ ನಿರ್ದೇಶನದನ್ವಯ ಪರಿಷ್ಕರಣೆ ಕೈಗೊಂಡಿದೆ.

ಕರ್ನಾಟಕ ಸರ್ಕಾರ ರಾಜ್ಯಭಾಷೆಯನ್ನು ಪರಿಚಯಿಸುವ ಹಿನ್ನಲೆಯಲ್ಲಿ ಒಂದನೆಯ ತರಗತಿಯಿಂದ ನಾಲ್ಕನೆಯ ತರಗತಿಯವರೆಗೆ ಶ್ರೇಣಿಕೃತವಾಗಿ ಅನೌಪಚಾರಿಕವಾಗಿ ಬೋಧಿಸಲಾಗುತ್ತಿದೆ. ಈ ಹಿನ್ನಲೆಯಲ್ಲಿ ೫ನೇ ತರಗತಿಗೆ ಔಪಚಾರಿಕವಾಗಿ ದ್ವಿತೀಯಭಾಷೆಯಾಗಿ ಕನ್ನಡ ಬೋಧನೆಯ ಪಠ್ಯವನ್ನು ಸಿದ್ಧಪಡಿಸಲಾಗಿದೆ. ಮಕ್ಕಳ ವಯಸ್ಸು ಸಾಮಾನ್ಯವಾಗಿ ೧೦ವರುಷವಿದ್ದು ಅವರ ಭಾವನಾತ್ಮಕ ಬದುಕಿನನ್ವಯ, ಅವರ ಕನ್ನಡ ಕಲಿಕೆಯ ಶಬ್ದಭಂಡಾರವನ್ನು ಗುರುತಿಸಿಕೊಂಡು ಮಾನಸಿಕ ಸ್ತರದ ಆಧಾರದನ್ವಯ ಪಠ್ಯವನ್ನು ರಚಿಸಲಾಗಿದೆ. ಮಗುವಿನ ಕಲಿಕೆ, ಬೋಧನೆಗೆ ಎಷ್ಟೋ ತಾಂತ್ರಿಕ ಸೌಲಭ್ಯಗಳು ಲಭ್ಯವಿದ್ದರೂ ಇಂದೂ ಸಹ ಪಠ್ಯಪುಸ್ತಕಗಳು ಬೋಧನೆಯಲ್ಲಿ ಮಹತ್ವದಸ್ಥಾನ ಹೊಂದಿವೆ. ಅದು ಶಿಶು ಕೇಂದ್ರಿತವಾಗಿರಬೇಕು ಎಂಬುದು ನಿರ್ವಿವಾದ. ಇದರ ಜೊತೆಗೆ ಶಿಕ್ಷಕರು ಸಹ ಅನಿವಾರ್ಯವಾಗಿದ್ದಾರೆ. ಅವರು ಪಠ್ಯದ ರಚನೆ ಅಡಿಗಲ್ಲು ಅರಿತಿದ್ದರೆ ಉತ್ತಮ.



ಮಗುಕೇಂದ್ರಿತ ಪಠ್ಯವು ಪರಿಷ್ಕೃತ ಸಾಮರ್ಥ್ಯಾಧಾರಿತವಾಗಿದ್ದು ಪ್ರತಿಯೊಂದು ಪಾಠವನ್ನು, ರಚಿಸುವ ಸಂದರ್ಭದಲ್ಲಿ ಮಗು ಭಾಷಿಕವಾಗಿಯೂ, ಸಾಂಸ್ಕೃತಿಕವಾಗಿಯೂ, ನೈತಿಕವಾಗಿಯೂ, ಕಲಿಯಬೇಕಾದದ್ದನ್ನು ಸ್ವಕಲಿಕೆ ಹಿನ್ನಲೆಯಲ್ಲಿ ಕಲಿಯಬೇಕು. ಸೃಜನಶೀಲತೆಯನ್ನು ಬೆಳೆಸುವ ನಿಟ್ಟಿನಲ್ಲಿ ಉದ್ದೇಶಪೂರ್ವಕವಾಗಿ ಪರಿಶ್ರಮ ಪಡಲಾಗಿದೆ. ಭಾಷೆಯನ್ನು ಸ್ವಾಭಾವಿಕವಾಗಿ ಕಲಿಯಬೇಕೆಂಬ ಹಿನ್ನಲೆಯಲ್ಲಿ ಭಾಷಾ ಆಟಗಳನ್ನು, ಚಟುವಟಿಕೆಗಳನ್ನು, ಪದರಚನೆಯ ಕೌಶಲ್ಯವನ್ನು ಅಳವಡಿಸಲಾಗಿದೆ.

ಪಾಠಗಳ ವಿಷಯಗಳು ಚೇತೋಹಾರಿಯಾಗಿದ್ದು ; ಮಗುವಿನ ಮನೋವಿಜ್ಞಾನದ ಹಿನ್ನಲೆಯಲ್ಲಿ ರೂಪಿಸಲಾಗಿದೆ. ಪುಸ್ತಕದ ಕೊನೆಯಲ್ಲಿರುವ ಪಠ್ಯಸಮಷ್ಟಿಯ ತ:ಖ್ತೆಯನ್ನು ಬೋಧಿಸುವ ಶಿಕ್ಷಕರು, ವಿದ್ಯಾರ್ಥಿಗಳು ಹಾಗೂ ಪಾಲಕರು ಗಮನಿಸಿದರೆ ಬೋಧನೆಗೆ, ಕಲಿಕೆಗೆ ಒಂದು ಹೊಸ ಆಯಾಮ ದೊರಕುತ್ತದೆ.

ಇದರಿಂದ ಉದ್ದೇಶಪೂರ್ವಕ ಬೋಧನೆ ಹಾಗೂ ಕಲಿಕೆ ಸಾಧ್ಯವಾಗಿ ಭಾಷೆಯ ಸಾಮರ್ಥ್ಯಗಳು ಚೆನ್ನಾಗಿ ಕರಗತವಾಗುತ್ತವೆ. ಪ್ರತಿಪಾಠದ ಬೋಧನಾಪದ್ಧತಿಯನ್ನು ನಮೂದಿಸಲಾಗಿದೆ. ಬೋಧಕರು ಗಮನಿಸಿರಿ. ಕಲಿಕೆಗೆ ಬೋಧನೆ ಎಷ್ಟು ಮುಖ್ಯವೋ ಚಟುವಟಿಕೆಗಳು ಅಷ್ಟೇ ಮುಖ್ಯ. ಆಡಿಕಲಿ, ಮಾತಾಡಿ ಕಲಿ, ಬರೆದು ಕಲಿ, ಬದುಕಲು ಕಲಿ. ಈ ಪಠ್ಯದ ಉದ್ದೇಶವಾಗಿದೆ.

ಪಠ್ಯಪುಸ್ತಕದ ಜೊತೆ ಅಭ್ಯಾಸಪುಸ್ತಕ ಬೇರೆಯಾಗಿ ನೀಡದೆ, ಆಯಾ ಪಾಠದಲ್ಲಿಯೇ ಅಭ್ಯಾಸವನ್ನು ಅವಳಡಿಸಲಾಗಿದೆ. ಭಾಷೆಯ ಕಲಿಕೆಯನ್ನು ಸ್ವಕಲಿಕೆಗೆ ಆಧಾರಗೊಳಿಸಿದೆ. ಸ್ವಓದು, ಜ್ಞಾನ ಗ್ರಹಿಕೆ, ಅಭಿವ್ಯಕ್ತಿ ಮತ್ತು ಪ್ರಶಂಸೆಯನ್ನು ಕರಗತಗೊಳಿಸುವಲ್ಲಿ ಹೆಚ್ಚಿನ ಪ್ರಯತ್ನ ಮಾಡಲಾಗಿದೆ.

ಪಠ್ಯದಲ್ಲಿ ಮಗು ಒಂದಾಗುವಿಕೆಯೇ ನಮ್ಮ ಉದ್ದೇಶ. ಅದನ್ನು ಹಬ್ಬಗಳು ಪಾಠದಲ್ಲಿ ಮಾದರಿಯಾಗಿ ನೀಡಲಾಗಿದೆ. "ಜಲಮಾಲಿನ್ಯ" ಪಾಠದಲ್ಲಿ ಸಾಮಾಜಿಕ ಬದುಕಿಗಾಗಿ ಸತ್ಯಾಗ್ರಹ, 'ಇದೊಂದು ಸತ್ಯ ಕಥೆ'ಯಲ್ಲಿ ಭ್ರಷ್ಟಾಚಾರದ ವಿರುದ್ಧ ಗಾಂಧಿಮಾರ್ಗಬಳಸಲಾಗಿದೆ. ತಾಯ್ತನ, ದೇಶಪ್ರೇಮ, ಸೌಂದರ್ಯಪ್ರಜ್ಞೆ ಹೀಗೆ ಹತ್ತು ಹಲವು ಬದುಕಿನ ಮುಖಗಳನ್ನು ಪರಿಚಯಿಸಿದೆ. ಕಥಾ ಕಸ್ತೂರಿ ಹೆಚ್ಚಿನ ಓದಿಗಾಗಿ ಸೇರಿಸಲಾಗಿದೆ. ಮಕ್ಕಳೆ ಓದಿ ಗ್ರಹಿಸಿಕೊಳ್ಳಬೇಕು.

ಭಾವಸೌಂದರ್ಯವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಇದೊಂದು ಪ್ರಯತ್ನ. ಶಿಕ್ಷಕರು ವಿದ್ಯಾರ್ಥಿಗಳು ಇದನ್ನು ಪ್ರೀತಿಯಿಂದ ಸ್ವೀಕರಿಸಿರಿ.

ಪಠ್ಯಪುಸ್ತಕ ರಚನೆಯಲ್ಲಿ ನೆರವಾದ ಸಮಿತಿಯ ಸನ್ಮಿತ್ರ ಸದಸ್ಯರ ಬೆಂಬಲ, ವಿಶ್ವಾಸ, ಸಹಕಾರ ಮತ್ತು ಹೃದಯವಂತಿಕೆಯನ್ನು ನೆನೆಯುತ್ತೇನೆ. ಚಿತ್ರಕಲಾವಿದರ ಶ್ರಮ ಸಾರ್ಥಕವಾಗಿದೆ. ಪಠ್ಯಪುಸ್ತಕ ಸಂಘದ ವ್ಯವಸ್ಥಾಪಕ ನಿರ್ದೇಶಕರು, ಸಂಯೋಜಕರು, ಉಪ ನಿರ್ದೇಶಕರು ಹಾಗೂ ಹಿರಿಯ ಸಹಾಯಕ ನಿರ್ದೇಶಕರು, ಅವರ ಸಿಬ್ಬಂದಿ ಮತ್ತು ನಮ್ಮೀ ಕಾರ್ಯಕ್ಕೆ ಸಕಲ ಸಹಕಾರ ಮಾಡಿಕೊಟ್ಟ ಎಲ್ಲರಿಗೂ ವಿಶ್ವಾಸಪೂರ್ವಕ ವಂದನೆಗಳು.

**ರಾಮಣ್ಣಹವಳೆ**
ಅಧ್ಯಕ್ಷರು
ಪಠ್ಯಪುಸ್ತಕ ರಚನಾ ಸಮಿತಿ

# ಮೊದಲನೆಯ ಸೆಮಿಸ್ಟರ್

## ಪರಿವಿಡಿ


| ಕ್ರ.ಸಂ. | ಭಾಗ –೧ ಪೂರ್ವ ಸಿದ್ಧತಾ ಪಾಠಗಳು | ಪುಟ ಸಂಖ್ಯೆ |
|---|---|---|
| ಅ) | ಚುಕ್ಕಿ ಸೇರಿಸು – ಚಿತ್ರ ರಚಿಸು | ೧ |
| ಆ) | ಕಥೆ ಕೇಳಿಸಿ – ಕಥೆ ಹೇಳಿಸಿ | ೨ |
| ಇ) | ಗೆಲುವಿನ ಗುಟ್ಟು | ೪ |
| ಈ) | ಆಸೆ (ಕವಿತೆ) | ೬ |
| ಉ) | ನಾನೇ ಓದುವೆ – ಗಾಳಿಪಟ | ೮ |
| | ಭಾಗ – ೨ ಗದ್ಯ – ಪದ್ಯ | |
| ೧. | ಕನ್ನಡ ನುಡಿ (ಕವಿತೆ) | ೧೧ |
| ೨. | ನನ್ನ ದೇಶ ನನ್ನ ಜನ | ೧೮ |
| ೩. | ನವಿಲು | ೨೫ |
| ೪. | ಗೂಡಿನಿಂದ ಬಾನಿನೆಡೆಗೆ (ಕವಿತೆ) | ೩೩ |
| ೫. | ಹಸ್ತ ರೇಖೆ ಬದಲಿಸಿದ ಬಾಲಕ | ೩೮ |
| ೬. | ಹಬ್ಬಗಳು | ೪೬ |
| ೭. | ಸವಿಯಾಗು ಸವಿಯಾಗು (ಕವಿತೆ) | ೫೪ |
| | ಪಠ್ಯ ಪುಸ್ತಕ ರಚನಾ ವಿವರ ತಃಖ್ತೆ | ೬೦ |

# ಎರಡನೆಯ ಸೆಮಿಸ್ಟರ್

## ಪರಿವಿಡಿ


| ಕ್ರ.ಸಂ. | ಭಾಗ – ೧ ಗದ್ಯ – ಪದ್ಯ | ಪುಟ ಸಂಖ್ಯೆ |
|---|---|---|
| ೧. | ಸಾಹಸಿ ಮಹಿಳೆಯರು | ೬೩ |
| ೨. | ಧೀರ ಬಾಲಕ ನರೇಂದ್ರ | ೭೦ |
| ೩. | ಅಮ್ಮ (ಕವಿತೆ) | ೭೬ |
| ೪. | ಜಲ ಮಾಲಿನ್ಯ | ೮೨ |
| ೫. | ಇದೊಂದು ಸತ್ಯ ಕಥೆ | ೯೦ |
| ೬. | ಉದಯರಾಗ (ಕವಿತೆ) | ೯೮ |
| ೭. | ಒಂದು ಪತ್ರಿಕೆ ವರದಿ | ೧೦೩ |
| ೮. | ಪತ್ರಗಳು | ೧೧೦ |
| ೯. | ಜನಪದ (ಕವಿತೆ) | ೧೧೪ |
| | ಭಾಗ – ೨ ಕಥಾ ಕಸ್ತೂರಿ | |
| ಅ) | ಶ್ರವಣಕುಮಾರ | ೧೧೮ |
| ಆ) | ಬಕಾಸುರ | ೧೨೦ |
| ಇ) | ಚಿತ್ರ ನೋಡಿ ಕಥೆ ಓದು ೧ | ೧೨೩ |
| ಈ) | ಚಿತ್ರ ನೋಡಿ ಕಥೆ ಓದು ೨ | ೧೨೫ |
| ಉ) | ಪದಬಂಧಗಳು | ೧೨೬ |
| | ಪಠ್ಯಪುಸ್ತಕ ರಚನಾ ವಿವರ ತಃಖ್ತೆ | ೧೨೭ |
| | ಪದಕೋಶ | ೧೩೦ |




ಡಿ.ಟಿ.ಪಿ/ವಿನ್ಯಾಸ : ಶ್ರೀ ಸುಬ್ರಮಣ್ಯೇಶ್ವರ ಬುಕ್ ಡಿಪೋ, ಬೆಂಗಳೂರು-2

## (ಆ) ಕಥೆ ಕೇಳಿಸಿ – ಕಥೆ ಹೇಳಿಸಿ

ಒಂದಾನೊಂದು ಕಾಲದಲ್ಲಿ ಬೇಡನೊಬ್ಬ ಪಕ್ಷಿಗಳನ್ನು ಹಿಡಿಯಲು ಕಾಳು ಹಾಕಿ ಬಲೆ ಹರಡಿದ್ದನು. ಕಾಳಿನ ಆಸೆಗಾಗಿ ಕೆಲವು ಪಾರಿವಾಳಗಳು ಬಂದವು. ಅವು ಬಲೆಯಲ್ಲಿ ಸಿಕ್ಕಿಹಾಕಿಕೊಂಡವು.



ಪಾರಿವಾಳಗಳೆಲ್ಲವೂ ಬಲೆಯಿಂದ ಬಿಡಿಸಿಕೊಳ್ಳಲು ಹೆಣಗಾಡಿದವು. ಆದರೆ ಸಾಧ್ಯವಾಗಲಿಲ್ಲ. ಅದೇ ಸಮಯಕ್ಕೆ ಕಾಗೆಯೊಂದು ಹಾರಿ ಹೋಗುತ್ತಿತ್ತು. ಅದು ಬಲೆಗೆ ಸಿಕ್ಕಿಬಿದ್ದಿದ್ದ ಪಾರಿವಾಳಗಳನ್ನು ನೋಡಿ ಮರುಗಿತು. ಪಾರಿವಾಳಗಳು ಸಹಾಯಕ್ಕಾಗಿ ಬೇಡಿದವು. ಕಾಗೆ ಉಪಾಯ ಸೂಚಿಸಿತು.

ಕಾಗೆ ಅವುಗಳಿಗೆ, 'ಎಲ್ಲರೂ ಕೂಡಿ ಒಮ್ಮೆಲೆ ಹಾರಿ ಬಿಡಿ' ಎಂದು ಹುರಿದುಂಬಿಸಿತು. ಪಾರಿವಾಳಗಳು ಪ್ರಯತ್ನ ಮಾಡಿ ಒಮ್ಮೆಲೆ ಬಲೆ ಸಹಿತ ಮೇಲೆ ಹಾರಿದವು.





ಬಲೆ ಸಹಿತ ಬೆಟ್ಟದ ಸಮೀಪ ಇಳಿದವು. ಇಲಿಗಳ ಸಹಾಯ ಬೇಡಿದವು. ಇಲಿಗಳು ಬಂದು ಬಲೆ ಕತ್ತರಿಸಿದವು. ಪಾರಿವಾಳಗಳು ಬಲೆಯಿಂದ ಬಿಡಿಸಿಕೊಂಡವು. ಅವುಗಳು ಕಾಗೆ ಮತ್ತು ಇಲಿಗಳಿಗೆ ಧನ್ಯವಾದ ಹೇಳಿ ಪುನಃ ಹಾರಿಹೋದವು.

**ನೀತಿ : ಒಗ್ಗಟ್ಟಿನಲ್ಲಿ ಬಲವಿದೆ ಮತ್ತು ಕಷ್ಟದಲ್ಲಿರುವವರಿಗೆ ಸಹಾಯ ಮಾಡು.**

## ಅಭ್ಯಾಸ

**೧. ಈ ಪ್ರಶ್ನೆಗಳಿಗೆ ಉತ್ತರಿಸಿ.**

ಅ) ಯಾರು ಬಲೆ ಬೀಸಿದರು ?

....................................................................................................

ಆ) ಬೇಡ ಏಕೆ ಬಲೆ ಬೀಸಿದನು ?

....................................................................................................

ಇ) ಬಲೆಯಲ್ಲಿ ಸಿಕ್ಕಿಕೊಂಡ ಪಕ್ಷಿಗಳು ಯಾವುವು ?

....................................................................................................

ಈ) ಕಾಗೆಯು ಪಾರಿವಾಳಗಳಿಗೆ ಏನು ಹೇಳಿತು?

....................................................................................................

ಉ) ಪಾರಿವಾಳಗಳು ಏನು ಮಾಡಿದವು ?

....................................................................................................

ಊ) ಅವು ಎಲ್ಲಿ ಇಳಿದವು?

....................................................................................................

ಋ) ಯಾರ ಸಹಾಯದಿಂದ ಬಲೆ ಕತ್ತರಿಸಿ ಕೊಂಡವು?

....................................................................................................

ಎ) ಪಾರಿವಾಳಗಳು ಯಾರಿಗೆ ಧನ್ಯವಾದ ಹೇಳಿದವು?

....................................................................................................

ಏ) ಇಲ್ಲಿ ನಮಗೆ ತೋರಿ ಬರುವ ನೀತಿ ಯಾವುದು?

....................................................................................................

**೨. ಪಾರಿವಾಳದ ಚಿತ್ರ ಬರೆಯಿರಿ.**

## (ಇ) ಗೆಲುವಿನ ಗುಟ್ಟು

ಒಬ್ಬ ರಾಜನಿದ್ದ. ಒಮ್ಮೆ ಅವನ ಮೇಲೆ ಶತ್ರು ರಾಜನೊಬ್ಬ ದಂಡೆತ್ತಿ ಬಂದ.ಯುದ್ಧ ಮಾಡಿ ಸೋಲಿಸಿದ. ಸೋತ ರಾಜನನ್ನು ಸೆರೆಮನೆಗೆ ತಳ್ಳಿದ. ಸೆರೆಮನೆಯಲ್ಲಿ ರಾಜ ನಿರಾಶನಾಗಿ ಚಿಂತಿಸುತ್ತ ಕುಳಿತನು.



ಸೆರೆಮನೆಯ ಮೂಲೆಯಲ್ಲಿ ಒಂದು ಜೇಡ ಬಲೆ ಹೆಣೆಯುತ್ತಿರುವುದು ರಾಜನ ಕಣ್ಣಿಗೆ ಬಿತ್ತು. ಆದರೆ ಹೆಣೆದ ಬಲೆ ಗಾಳಿಗೆ ಸಿಕ್ಕಿ ಪದೇ ಪದೇ ಹರಿದು ಬೀಳುತ್ತಿತ್ತು. ಜೇಡವೂ ಕೆಳಗೆ ಬೀಳುತ್ತಿತ್ತು. ಆದರೂ ತನ್ನ ಪ್ರಯತ್ನವನ್ನು ಬಿಡದ ಜೇಡ ಮೇಲೆ ಹೋಗಿ ತನ್ನ ಕೆಲಸವನ್ನು ಮುಂದುವರೆಸುತ್ತಿತ್ತು. ಅದು ಅನೇಕ ಬಾರಿ ಪ್ರಯತ್ನ ಮಾಡಿತು. ಕೊನೆಗೊಮ್ಮೆ ಬಲೆಯನ್ನು ಪೂರ್ಣ ಹೆಣೆಯುವುದರಲ್ಲಿ ಯಶಸ್ಸನ್ನು ಕಂಡಿತು. ಇದನ್ನು ನೋಡಿದ ರಾಜನಿಗೆ ಅಚ್ಚರಿಯಾಯಿತು.





ತಾನೂ ಏಕೆ ಈ ರೀತಿ ಪ್ರಯತ್ನ ಪಡಬಾರದು? ಎಂದು ಯೋಚಿಸಿದ. ಹಾಗೆಯೆ ಮುಂದುವರೆದು ಸ್ವಪ್ರಯತ್ನದಿಂದ ಸೆರೆಮನೆಯಿಂದ ತಪ್ಪಿಸಿಕೊಂಡನು. ತನ್ನ ರಾಜ್ಯಕ್ಕೆ ಹೋಗಿ ಸೈನಿಕರನ್ನು ಒಟ್ಟು ಗೂಡಿಸಿದ. ಬಲವಾದ ಸೈನ್ಯವನ್ನು ಕಟ್ಟಿದ. ತನ್ನನ್ನು ಸೋಲಿಸಿದ ರಾಜನ ಮೇಲೆ ಯುದ್ಧ ಮಾಡಿದ. ಅವನನ್ನು ಪರಾಭವ ಗೊಳಿಸಿ ರಾಜ್ಯಗಳಿಸಿದನು.

**ನೀತಿ: ಸತತ ಪ್ರಯತ್ನವೇ ಗೆಲುವಿನ ಗುಟ್ಟು**

## ೧. ಈ ಪ್ರಶ್ನೆಗಳಿಗೆ ಉತ್ತರಿಸಿರಿ.

ಅ) ರಾಜನ ಮೇಲೆ ಯಾರು ದಂಡೆತ್ತಿ ಬಂದರು?

..................................................................................................

ಆ) ಸೋತ ರಾಜನನ್ನು ಅವನು ಎಲ್ಲಿ ಕಳುಹಿಸಿದನು?

..................................................................................................

ಇ) ಸೆರೆಮನೆಯಲ್ಲಿ ರಾಜನು ಏನು ನೋಡಿದನು?

..................................................................................................

ಈ) ಜೇಡ ಏನು ಮಾಡುತ್ತಿತ್ತು?

..................................................................................................

ಉ) ಜೇಡರ ಬಲೆ ಏಕೆ ಹರಿದು ಬೀಳುತ್ತಿತ್ತು?

..................................................................................................

ಊ) ಆಗ ಜೇಡ ಪುನಃ ಏನು ಮಾಡುತ್ತಿತ್ತು?

..................................................................................................

ಋ) ಜೇಡ ಯಾವಾಗ ಯಶಸ್ಸು ಕಂಡಿತು?

..................................................................................................

ಎ) ಬಲೆಯನ್ನು ನೋಡಿದ ರಾಜನಿಗೆ ಏನು ಅನಿಸಿತು?

..................................................................................................

ಏ) ರಾಜ ತನ್ನ ರಾಜ್ಯಕ್ಕೆ ಹೋಗಿ ಏನು ಮಾಡಿದನು?

..................................................................................................

ಐ) ರಾಜ ಯಾರನ್ನು ಸೋಲಿಸಿದನು?

..................................................................................................

ಒ) ಈ ಕಥೆಯಿಂದ ಯಾವ ನೀತಿ ಕಲಿಯುವಿರಿ?

..................................................................................................

## ೨. ಜೇಡರ ಬಲೆ ಚಿತ್ರ ಬಿಡಿಸಿರಿ.



## (ಈ) ಆಸೆ



ಹಕ್ಕಿಯ ಹಾಡಿಗೆ ತಲೆದೂಗುವ ಹೂ
ನಾನಾಗುವ ಆಸೆ
ಹಸುವಿನ ಕೊರಳಿನ ಗೆಜ್ಜೆಯ ದನಿಯು
ನಾನಾಗುವ ಆಸೆ
ಹಬ್ಬಿದ ಕಾಮನ ಬಿಲ್ಲಿನ ಮೇಲಿನ
ಮುಗಿಲಾಗುವ ಆಸೆ
ಚಿನ್ನದ ಬಣ್ಣದ ಜಿಂಕೆಯ ಕಣ್ಣಿನ
ಮಿಂಚಾಗುವ ಆಸೆ
ತೋಟದ ಕಂಪಿನ ಉಸಿರಲಿ ತೇಲುವ
ಜೇನಾಗುವ ಆಸೆ
ಕಡಲಿನ ನೀಲಿಯ ನೀರಲಿ ಬಳುಕುವ
ಮೀನಾಗುವ ಆಸೆ
ಸಿಡಿಲನು ಕಾರುವ ಬಿರುಮಳೆಗಂಜದೆ
ಮುನ್ನಡೆಯುವ ಆಸೆ
ನಾಳೆಯ ಬದುಕಿನ ಇರುಳಿನ ತಿರುವಿಗೆ ದೀಪವನಿಡುವಾಸೆ

–ಕೆ.ಎಸ್. ನರಸಿಂಹಸ್ವಾಮಿ.

೧ ಹಾಡನ್ನು ರಾಗಬದ್ಧವಾಗಿ ಅಭಿನಯದಿಂದ ಹೇಳಿರಿ.

೨. ಈ ಪ್ರಶ್ನೆಗಳಿಗೆ ಉತ್ತರಿಸಿರಿ.

ಅ) ಹೂವು ಯಾವುದಕ್ಕೆ ತಲೆದೂಗುತ್ತದೆ ?

........................................................................................................

ಆ) ಹಬ್ಬಿದ ಕಾಮನಬಿಲ್ಲಿನ ಮೇಲೆ ಕವಿಗೆ ಏನಾಗುವ ಆಸೆ?

........................................................................................................

ಇ) ಕವಿಗೆ ಕಡಲಿನಲ್ಲಿ ಏನಾಗುವ ಆಸೆ ?

........................................................................................................

ಈ) ಕವಿಗೆ ಎಲ್ಲಿ ದೀಪವಿಡುವ ಆಸೆ ?

........................................................................................................

೩. ಕಾಮನ ಬಿಲ್ಲಿನ ಚಿತ್ರ ಬರೆದು ಬಣ್ಣ ತುಂಬು.





## (ಉ) ನಾನೇ ಓದುವೆ....

# ಗಾಳಿ ಪಟ



ಊರ ಮುಂದಿನ ಬಯಲಿನಲಿ ಹುಡುಗರ ಕಲರವವೋ ಕಲರವ. ಅವರ ನೋಟವು ಆಗಸದ ಕಡೆಗೆ. ಅರೆರೆ ! ಅದೋ ನೋಡಿ! ಮೇಲೆ ಕೆಳಗೆ ಲಾಗ ಹೊಡೆಯುವ ಚೆಲುವಿನ ತಾರೆಗಳು ! ಪಟಪಟ ಗಾಳಿಪಟಗಳು. ಅಬ್ಬಬ್ಬಾ! ಬಗೆ ಬಗೆಯ ಪಟಗಳಿವು, ಬುಗುಲಿ ಪಟ, ಹನುಮನ ಪಟ, ತಾರಾ ಪಟ, ಆಯತ ಪಟ, ಚೌಕದ ಪಟ, ಕೋಲ ಪಟ, ಗಾಳಿಯ ಪಟ, ಹಾವಿನ ಪಟ, ಹೀಗೆ ಸಾಲುಸಾಲಾಗಿ ಹಾರುವ ಸರಣಿ ಪಟಗಳು. ಅಲಲಾ! ಅನೇಕ ಬಗೆಗಳು.

ಆಗಸಕೆ ದಾಳಿಯಿಡುವ ಪಟಗಳೋ ನೂರಾರು. ರಂಗುಗಳೋ ಹಲವಾರು. ಕೆಂಪು, ಕೇಸರಿ, ಹಸಿರು, ನೀಲಿ, ಹಳದಿ ರಂಗು ರಂಗಿನ ರಂಗೋಲಿ ಮೂಡಿಸಿವೆ. ಗಾಳಿ ಪಟಗಳ ರೂಪು-ರಂಗುಗಳು ಸಾವಿರ ತರಹ. ಆದರೆ ಹಾಕುವ ದಾರದ ಸಾಧನದ ಗಂಟು ಒಂದೇ ತರಹ. ಮೇಲೆ ಮೇಲೆ ಹಾರಲು ಪಟಗಳಿಗೆ ಬೇಕು ಬಾಲಂಗೋಸಿ. ಅದು ಸಮತೋಲನ ಬಾಲಂಗೋಸಿ.

ಆಗಸದಿ ಬಳುಕುವ ಈ ಪಟಗಳು, ಕೆಲವರಿಗೆ ಮಾವು ತರಲು ಆಗಸಕೆ ಹಾರಿದ ಬಾಲಹನುಮನಂತೆ ಕಾಣುವವು. ಹಲವರಿಗೆ ನೀಲಿ ಸಾಗರದಲಿ ಈಜುವ ರಂಗು ರಂಗಿನ ಮೀನುಗಳಾಗಿ ಕಾಣುವವು. ತಿಳಿದವರಿಗೆ ಮಾನವರ ಸಂದೇಶ ದೇವಲೋಕಕೆ ಸಾಗಿಸುವ ರಾಯಭಾರಿಗಳಂತೆ ಕಾಣುವವು. ವಿಧ ವಿಧ ರಂಗು, ಬಗೆ ಬಗೆ ಆಕಾರದ ಪಟಗಳು, ನೀಲಿ ನಭಕೆ ರಂಗು ಬಳಿಯುವ ಹುಡುಗರ ಆಟವಿದು. ಅವರು ಮೇಲಾಟದಲಿ ಸಂತಸ ಪಡುವ ತುಂಟಾಟವಿದು. ಮನ ಸೆಳೆಯುವ ನೋಟವಿದು.

ಪಟ ಹಾರಿಸಲು ಸುಳಿವ ಗಾಳಿಬೇಕು. ಸುಂಟರಗಾಳಿಯಾದರೆ ಮರುಗಾಟ ಶುರು. ಬಾಲಂಗೋಸಿ ಹರಿದರೆ ಗಿರಿಗಿರಿ ತಿರು–ತಿರುಗಿ ಗಿರಕಿ ಹೊಡೆಯುವವು. ಮೇಲೆ ಹಾರಲಾರದೆ ಕೆಳಗಿಳಿದು ಬರಲು ಹಟ ಹಿಡಿಯುವವು. ಬಿರುಗಾಳಿ ಬೀಸಿತೆಂದರೆ ದಾರ ಹರಿದು ಜಟಾಪಟಿ. ಹುಡುಗರು ಗಾಳಿಗೆ ಹಿಡಿಶಾಪ ಹಾಕುವರು. ಮರುಗಳಿಗೆ ಪಟ ಹಿಡಿಯಲು ಓಡುವರು. ಮಾಳಿಗೆ, ಮಾಳಿಗೆ ಜಿಗಿಯಲು ಆರಂಭವಾಗುವುದು. ಆಗ ತಂದೆ ತಾಯಿಗಳ ಗೋಳಾಟ. ಹುಡುಗರಿಗೆ ಆಟ, ಪಾಲಕರಿಗೆ ಸಂಕಟ. ದಾರ ಹರಿದ ಪಟ ಹಿಡಿದರೆ, ಆಗ ನೋಡು ಸಂತಸದ ನೋಟ ! ಎಂದೂ ಕಾಣದ ಆನಂದದ ಕೂಟ.

## ೧. ಈ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

ಅ) ಹುಡುಗರ ಕಲರವ ಎಲ್ಲಿತ್ತು ?

..............................................................................................

ಆ) ಆಗಸದಲ್ಲಿ ಏನು ಕಾಣುತ್ತಿದ್ದವು?

..............................................................................................

ಇ) ಪಟಗಳ ಬಗೆಗಳನ್ನು ತಿಳಿಸಿರಿ.

..............................................................................................

ಈ) ಪಟಗಳ ಬಣ್ಣಗಳನ್ನು ತಿಳಿಸಿರಿ.

..............................................................................................

ಉ) ಗಾಳಿಪಟಗಳು ಹೇಗೆ ಕಾಣುತ್ತಿದ್ದವು ? ಒಂದು ಉದಾಹರಣೆ ಕೊಡಿ.

..............................................................................................

ಊ) ಗಾಳಿಪಟಗಳ ಬಾಲಂಗೋಸಿ ಹರಿದರೆ ಅವು ಏನಾಗುವವು?

..............................................................................................

ಋ) ಮಕ್ಕಳು ಯಾರಿಗೆ ಶಾಪ ಹಾಕುವರು ?

..............................................................................................

ಎ) ಮಕ್ಕಳು ಗಾಳಿಪಟ ಹಿಡಿಯಲು ಏನು ಮಾಡುವರು?

..............................................................................................................

ಏ) ಮಕ್ಕಳು ಯಾವಾಗ ಸಂತಸ ಪಡುವರು?

..............................................................................................................

## ೨. ಇವುಗಳನ್ನು ೧೦ ಸಲ ವೇಗವಾಗಿ ಉಚ್ಚರಿಸಿರಿ.

ಅ) ಕಾಗಿಪುಕ್ಕ, ಗುಬ್ಬಿಪುಕ್ಕ.

ಆ) ಅಶ್ವತ್ಥರಳೀ ಮರದ ಬುಡದ ತಳಿರೊಡೆದೆರೆಡೆಲೆಯಾಯ್ತು.

ಇ) ಕಸ್ತೂರಿರಂಗ ಕಿಸ್ತೂರು ರಸ್ತೇಲಿ ಪಿಸ್ತೂಲೇಟ್ ತಿಂದ್ ಸತ್‌ಬಿದ್ದಿದ್ನಂತೆ.

ಈ) ತರಿಕೆರೆ ಏರಿಮ್ಯಾಲೆ ಮೂರುಕರಿ ಕುರಿಮರಿ.

ಉ) ಕಮಲಳ ಲಂಗ ಜಳ ಜಳ, ಸುಮಳ ಲಂಗ ಜಳ ಜಳ.

## ೩. ಈ ಸಾಲುಗಳನ್ನು ಗಟ್ಟಿಯಾಗಿ ಓದಿರಿ.

ದಟ್ಟ ಕಾಡು, ದೊಡ್ಡ ದೊಡ್ಡ ಮರಗಳು. ಅವಕ್ಕೆ ಬಳ್ಳಿಗಳು ಸುತ್ತಿದ್ದವು. ಅವು ದಪ್ಪ ದಪ್ಪ ಹಗ್ಗದಂತೆ ಕಾಣುತ್ತಿದ್ದವು. ಸುತ್ತಲು ಹಚ್ಚಹಸಿರು. ಕಣ್ಣಿಗೆ ಹಬ್ಬ. ಪಕ್ಕನೆ ಕೋಳಿಯೊಂದು ಪುರ್ರನೆ ಹಾರಿತು. ಬೆಚ್ಚಿ ಬಿದ್ದೆನು.

## ೪. ವಿವಿಧ ಗಾಳಿ ಪಟಗಳ ಚಿತ್ರ ಬರೆಯಿರಿ.

## ಪದ್ಯ ಪಾಠ – ೧

# ಕನ್ನಡ ನುಡಿ

ಮಕ್ಕಳೆ ಬನ್ನಿರಿ ಮಾತೊಂದು ಹೇಳುವೆ
ಚಿತ್ತವನಿಟ್ಟು ಆಲಿಸಿರಿ ॥ ಪ ॥

ಕನ್ನಡ ನುಡಿಯಲಿ ಕನ್ನಡ ಗುಡಿಯಲಿ
ಹೃದಯದ ಒಲುಮೆಯು ತುಂಬಿಹುದು
ಹಾಲಿನ ತೊರೆಯು ಸಕ್ಕರೆ ಮಳಲು
ಜೇನಿನ ಹನಿಯು ಅಲ್ಲಿಹುದು

ಪುಣ್ಯಕೋಟಿಯ ಬದುಕಿನ ಚರಿತೆಯು
ಜನಪದದಲ್ಲಿ ಮೂಡಿಹುದು
ಸಂಚಿಹೊನ್ನಮ್ಮನ ಹದಿಬದೆಧರ್ಮವು
ಥಳ ಥಳ ಅದರಲಿ ಹೊಳೆಯುವುದು

ಶರಣರು ರಚಿಸಿದ ವಚನಗಳೆಲ್ಲವು
ಬದುಕಿನ ಅಮೃತ ಕಣಜಗಳು
ದಾಸರ ನುಡಿಯಲಿ ಅರಳಿದ ಚೆಲುವು
ಕನ್ನಡದೊಲುಮೆಯ ಹವಳಗಳು

ಬನ್ನಿರಿ ಮಕ್ಕಳೆ ಕನ್ನಡ ಕಲಿಯಿರಿ
ಬದುಕಿನ ತಿರುಳನು ಅರಿಯುತ್ತ
ನಮ್ಮಯ ನಾಡಿನ ಪುಣ್ಯದ ಬೀಡಿನ
ನನ್ನಿಯ ಕಥೆಯನು ಬರೆಯುತ್ತ.

– ಎ.ಕೆ.ರಾಮೇಶ್ವರ

## ಕವಿ ಕೃತಿ ಪರಿಚಯ : ಎ.ಕೆ.ರಾಮೇಶ್ವರ



ಎ.ಕೆ. ರಾಮೇಶ್ವರರು ವಿಜಾಪುರ ಜಿಲ್ಲೆಯ ವದಾನುಹಟ್ಟಿಯಲ್ಲಿ ೨ನೇ ಮೇ ೧೯೩೪ರಲ್ಲಿ ಜನಿಸಿದರು. ಬಾಲ್ಯದ ಶಿಕ್ಷಣವನ್ನು ಹುಟ್ಟೂರಲ್ಲಿಯೇ ಮುಗಿಸಿ ಹೆಚ್ಚಿನ ಶಿಕ್ಷಣಕ್ಕಾಗಿ ಸಮೀಪದ ಸಾರವಾಡಕ್ಕೆ ಆಗಮಿಸಿದರು. ಬಡತನದ ಕಾರಣ ಶಿಕ್ಷಣ ಅರ್ಧಕ್ಕೆ ನಿಲ್ಲಿಸಿ ಗುಲ್ಬರ್ಗ ಜಿಲ್ಲೆಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಸೇವಾ ನಿರತರಾದರು. ಇವರು ಉತ್ತಮ ಶಿಕ್ಷಕರೆಂದು ರಾಜ್ಯಪ್ರಶಸ್ತಿ, ರಾಷ್ಟ್ರಪ್ರಶಸ್ತಿ ಪಡೆದಿದ್ದಾರೆ.

ಮಕ್ಕಳ ಸಾಹಿತ್ಯಕ್ಕೆ ಹೆಚ್ಚು ಒತ್ತು ಕೊಟ್ಟು ಮಕ್ಕಳಿಗಾಗಿ ಕಥೆ, ಕವನ, ನಾಟಕ, ಜೀವನ ಚರಿತ್ರೆ ಹಾಗೂ ಪ್ರಬಂಧಗಳನ್ನು ಬರೆದು ಮಕ್ಕಳ ಕವಿಯೆಂದೇ ಪ್ರಸಿದ್ಧರಾಗಿರುವರು. ಅವರಿಗೆ ೨೦೦೦ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ಲಭಿಸಿದೆ.

ಪ್ರಸ್ತುತ 'ಕನ್ನಡ ನುಡಿ' ಕವಿತೆ ಅವರ 'ಸಮಗ್ರ ಮಕ್ಕಳ ಕವನ' ಸಂಕಲನದಿಂದ ಆಯ್ಕೆ ಮಾಡಿಕೊಳ್ಳಲಾಗಿದೆ. ಕನ್ನಡ ನುಡಿ ಹಾಗೂ ಕನ್ನಡ ಗುಡಿಯಲ್ಲಿ ಹೃದಯದ ಒಲುಮೆ ತುಂಬಿದೆ. ಪುಣ್ಯಕೋಟಿಯ ಬದುಕಿನ ಕಥೆ, ವಚನಗಳು, ದಾಸರ ನುಡಿಗಳಿಂದ ಇದು ಸಿಂಗಾರವಾಗಿದೆ. ಕವಿಗಳು ಈ ಸುಂದರ ಭಾಷೆ ಕಲಿಯಲು ಒತ್ತಾಯಿಸಿದ್ದಾರೆ.



### ಓದಿ –ತಿಳಿ

ಚಿತ್ತ– ಮನಸ್ಸು, ಆಲಿಸು– ಮನಸ್ಸಿಟ್ಟು ಕೇಳು, ಒಲುಮೆ–ಪ್ರೀತಿ, ಮಳಲು – ಮರಳು, ತೊರೆ–ಚಿಕ್ಕಹೊಳೆ, ತಿರುಳು–ಸತ್ವ , ಸಾರ, ನನ್ನಿ– ಪ್ರೀತಿ,ಸತ್ಯ.

### ಗಮನಿಸಿ– ತಿಳಿ

ಕಣಜ : ಧಾನ್ಯ ಸಂಗ್ರಹಣ ಸ್ಥಳ

ಪುಣ್ಯಕೋಟಿ : ಸತ್ಯಕ್ಕಾಗಿ ಬದುಕಿದ ಗೋವಿನ ಹೆಸರು. ಇದು ಜಾನಪದ ಕಥೆ

ಸಂಚಿಹೊನ್ನಮ್ಮ : ಒಬ್ಬ ಕವಿಯಿತ್ರಿ, ಹದಿಬದೆ ಧರ್ಮ ಎಂಬ ಕಾವ್ಯವನ್ನು ಬರೆದವರು.

ಹವಳ : ನವರತ್ನಗಳಲ್ಲಿ ಒಂದು, ಸಮುದ್ರದ ಜೀವಿಯಿಂದ ಉತ್ಪನ್ನವಾಗುವ ಒಂದು ಕಠಿಣ ಪದಾರ್ಥ

ತಾಯಿನುಡಿ : ತಾಯಿಯಿಂದ ಕಲಿಯುವ ಮೊದಲ ನುಡಿ, ಮಾತೃಭಾಷೆ.

## ಅಭ್ಯಾಸ

### ೧. ಒಂದು ವಾಕ್ಯದಲ್ಲಿ ಉತ್ತರಿಸಿರಿ.

ಅ) ಕನ್ನಡದ ನುಡಿಯಲ್ಲಿ ಏನು ತುಂಬಿದೆ?

ಆ) ಜಾನಪದದಲ್ಲಿ ಮೂಡಿದ ಸತ್ಯದ ಬದುಕಿನ ಚರಿತ್ರೆ ಯಾವುದು?

ಇ) ಹದಿಬದೆಧರ್ಮ ಗ್ರಂಥವನ್ನು ಬರೆದವರಾರು?

ಈ) ಚೆಲುವು ಎಲ್ಲಿ ಅರಳಿದೆ?

ಉ) ಮಕ್ಕಳಿಗೆ ನೀಡುವ ಕರೆ ಯಾವುದು?

ಊ) ಕವಿ ಯಾವ ಕಥೆಯನ್ನು ಬರೆಯಲು ಕೇಳುತ್ತಾನೆ ?

### ೨. ಎರಡು –ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

ಅ) ಕನ್ನಡ ನುಡಿಯಲಿ ಏನೇನು ಅಡಗಿದೆ ?

ಆ) ಏನನ್ನು ಕಲಿಯಲು ಕವಿ ಕರೆ ನೀಡುತ್ತಾನೆ ?

### ೩. ಬಿಟ್ಟ ಸ್ಥಳ ತುಂಬಿರಿ.

ಅ) ಹಾಲಿನ ತೊರೆಯು ಸಕ್ಕರೆ ಮಳಲು ...................... ಹನಿಯು ಅಲ್ಲಿಹುದು.

ಆ) ಪುಣ್ಯಕೋಟಿಯ ಬದುಕಿನ ಚರಿತೆಯು ...................... ಮೂಡಿಹುದು.

ಇ) ಬನ್ನಿರಿ ಮಕ್ಕಳೆ ಕನ್ನಡ ಕಲಿಯಿರಿ ಬದುಕಿನ ...................... ಅರಿಯುತ್ತ.

ಈ) ಶರಣರು ರಚಿಸಿದ ವಚನಗಳೆಲ್ಲವು ಬದುಕಿನ ......................

ಉ) ದಾಸರ ನುಡಿಯಲಿ ...................... ಕನ್ನಡದೊಲುಮೆಯ ಹವಳಗಳು.



### ೪. ಹೊಂದಿಸಿ ಬರೆಯಿರಿ.

| | ಅ | ಆ | |
|---|---|---|---|
| ಅ) | ಹೃದಯದ ಒಲುಮೆ | ೧) ಹವಳಗಳು | ...................... |
| ಆ) | ಪುಣ್ಯಕೋಟಿ | ೨) ಅಮೃತ ಕಣಜಗಳು | ...................... |
| ಇ) | ಹದಿಬದೆಧರ್ಮ | ೩) ಗೋವು | ...................... |
| ಈ) | ದಾಸರನುಡಿಗಳು | ೪) ಕನ್ನಡ ನುಡಿಯಲಿ | ...................... |
| ಉ) | ಶರಣರ ವಚನಗಳು | ೫) ಸಂಚಿಹೊನ್ನಮ್ಮ | ...................... |

೫. ಈ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಉಪಯೋಗಿಸಿರಿ.

ಚಿತ್ತ : ..............................................................................................

ಒಲುಮೆ : ..............................................................................................

ಜನಪದ : ..............................................................................................

ಕಣಜ : ..............................................................................................

ತಿರುಳು : ..............................................................................................

೬. ನಾಲ್ಕು ಸಾಲಿನಲ್ಲಿ ಟಿಪ್ಪಣಿ ಬರೆಯಿರಿ.

ಕನ್ನಡ ನುಡಿ

..............................................................................................

..............................................................................................

..............................................................................................

..............................................................................................



೭. ಈ ನುಡಿಯಲ್ಲಿ ಗೆರೆ ಹಾಕಿದ ಪ್ರಾಸ ಪದಗಳನ್ನು ಹುಡುಕಿ ಜೋಡಿಸಿ ಬರೆಯಿರಿ.

ಕನ್ನಡ ನುಡಿಯಲಿ ಕನ್ನಡ ಗುಡಿಯಲಿ
ಹೃದಯದ ಒಲುಮೆಯ ತುಂಬಿಹುದು
ಹಾಲಿನ ತೊರೆಯು ಸಕ್ಕರೆ ಮಳಲು
ಜೇನಿನ ಹನಿಯು ಅಲ್ಲಿಹುದು

**ಮಾದರಿ :–** **ನುಡಿಯಲಿ** **ಗುಡಿಯಲಿ**

.................... ....................

.................... ....................

೮. ಕೆಳಗಿನ ವಾಕ್ಯಗಳನ್ನು ಪದ್ಯದಲ್ಲಿರುವಂತೆ ಸರಿಪಡಿಸಿ ಬರೆಯಿರಿ.

ಅ) ಕನ್ನಡ ನಡೆಯಲಿ ಕನ್ನಡ ಗಡಿಯಲಿ ಹೃದಯದ ಒಲುಮೆ

..........................................................................................

ಆ) ಪಾಪಕೋಟಿಯ ಬದುಕಿನ ಚರಿತೆಯು ಜನಪದದಲ್ಲಿ ಮೂಡಿಹುದು.

..........................................................................................

ಇ) ಬನ್ನಿರಿ ಮಕ್ಕಳೆ ಕುಡಿಯಿರಿ ಬದುಕಿನ ತಿರುಳನು ಅರಿಯುತ್ತ

..........................................................................................

ಈ) ನಮ್ಮಯ ನಾಡಿನ ಪುಣ್ಯದ ಬೀಡಿನ ನಿನ್ನಯ ಕಥೆಯನು ಬರೆಯುತ್ತ

..........................................................................................

೯. ಈ ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದ ಬರೆಯಿರಿ.

ಮಾದರಿ : ಪುಣ್ಯ x ಪಾಪ

ಅ) ಮೂಡು x ..............................

ಆ) ಧರ್ಮ x ..............................

ಇ) ಅರಳು x ..............................



೧೦. ಈ ಪದಗಳನ್ನು ನಕಲು ಮಾಡಿ ೫ ಸಲ ಬರೆಯಿರಿ.

| ಚಿತ್ತ | ಸಕ್ಕರೆ | ಪುಣ್ಯ | ಅಮೃತ | ನನ್ನಿ | ಹೃದಯ | ಒಲುಮೆ |
|---|---|---|---|---|---|---|
| ........... | ........... | ........... | ........... | ........... | ........... | ........... |
| ........... | ........... | ........... | ........... | ........... | ........... | ........... |
| ........... | ........... | ........... | ........... | ........... | ........... | ........... |
| ........... | ........... | ........... | ........... | ........... | ........... | ........... |
| ........... | ........... | ........... | ........... | ........... | ........... | ........... |

## ೧೧. ಸುಳಿವು ಪದ ಉಪಯೋಗಿಸಿ ಕವಿತೆ ಕಟ್ಟಿರಿ.

**ಮಾದರಿ : ನಮ್ಮ ನಾಡು ಕನ್ನಡ**

ನಮ್ಮ .................................... ಕನ್ನಡ

ನಮ್ಮ .................................... ಕನ್ನಡ

ನಮ್ಮ .................................... ಕನ್ನಡ

ನಮ್ಮ .................................... ಕನ್ನಡ

**(ಸುಳಿವು ಪದಗಳು : ಭಾಷೆ, ಉಸಿರು, ದೈವ, ಬೀಡು)**

ಈ ಹಾಡನ್ನು ಹೇಳಿಕೊಂಡು ಕುಣಿಯಿರಿ. ಸಂತಸ ಪಡಿ. ಇನ್ನೊಬ್ಬರಿಗೂ ಕಲಿಸಿ.

## ೧೨. ಹೊಂದಿಸಿ ಬರೆಯಿರಿ.

ಸೂಚನೆ : ಒಂದೆಡೆ ಪ್ರಾಣಿಗಳಿವೆ– ಇನ್ನೊಂದೆಡೆ ಪ್ರಾಣಿಗಳ ವಾಸ ಸ್ಥಳಗಳಿವೆ.

**ಮಾದರಿ : ಹುಲಿ – ಗವಿ**

ಇಲಿ – ಕೊಟ್ಟಿಗೆ ....................................

ಮನುಷ್ಯ – ಗಿಡದ ಪೊಟರು ....................................

ಮರಕುಟಿಗ – ಬಿಲ ....................................

ಗುಬ್ಬಿ – ಮನೆ ....................................

ದನ – ಗೂಡು ....................................



## ೧೩. ಈ ಪದಗಳಿಗೆ ಏಕ ವಚನ ಬರೆಯಿರಿ.

**ಮಾದರಿ : ಮಕ್ಕಳು – ಮಗು**

**ಬಹುವಚನ ಏಕವಚನ**

ಗುಡಿಗಳು ..........................................................................................

ತೊರೆಗಳು ..........................................................................................

ಕಥೆಗಳು ..........................................................................................

ಹವಳಗಳು ..........................................................................................

**೧೪. ಈ ನುಡಿಗಳನ್ನು ಓದಿ ಭಾವಾರ್ಥ ತಿಳಿದುಕೊಳ್ಳಿರಿ. ಹಾಡನ್ನು ಗುನುಗುನಿಸಿ.**

ಅ. ಸುಲಿದ ಬಾಳೆಯ ಹಣ್ಣಿನಂದದಿ
ಕಳೆದ ಸಿಗುರಿನ ಕಬ್ಬಿನಂದದಿ
ಅಳಿದ ಉಷ್ಣದ ಹಾಲಿನಂದದಿ
ಲಲಿತವಾಗಿಹುದು ಕನ್ನಡದ ನುಡಿಯು

– ಮಹಾಲಿಂಗ ರಂಗ

ಆ. ಕನ್ನಡಮ್ಮನ ಮಕ್ಕಳು ನಾವು
ಪ್ರೀತಿಯ ಗಂಧವ ಸೂಸುವೆವು
ಸಮರಸದಲ್ಲಿ ಹೃದಯವ ಬೆಸೆದು
ನಾಡಿನ ಸಿರಿಯನು ಬೆಳಗುವೆವು

– ದೊಡ್ಡಣ್ಣ ಗದ್ದನಕೇರಿ





## ಗದ್ಯ ಪಾಠ – ೨

# ನನ್ನ ದೇಶ – ನನ್ನ ಜನ





ನಮ್ಮ ದೇಶ ಭಾರತ. ನಾವು ಭಾರತೀಯರು. ಇದನ್ನು 'ಭರತ' ಮಹಾರಾಜ ಆಳಿದನು. ಆದುದರಿಂದ 'ಭಾರತ' ಎಂದು ಹೆಸರಾಯಿತು. ಇದು ಪುರಾತನ ದೇಶ. ಇದೊಂದು ಉಪಖಂಡವೂ ಅಹುದು. ಮೂರು ಕಡೆ ಸಾಗರ, ಒಂದು ಕಡೆ ಮಹಾ ಪರ್ವತ ಇದೆ. ಅದುವೇ ಹಿಮಾಲಯ.

ಈ ದೇಶವನ್ನು 'ಭರತ ಖಂಡ', ಹಿಂದೂಸ್ಥಾನ', ಇಂಡಿಯಾ', ಎಂದು ಕರೆಯುವರು. ನಮ್ಮ ದೇಶದ ವಿಸ್ತಾರ ೩೩ ಲಕ್ಷ ಚದರ ಕಿಲೋಮೀಟರ್‌ಗಳು. ಇದು ಕಾಶ್ಮೀರದಿಂದ ಕನ್ಯಾಕುಮಾರಿ, ಪಂಜಾಬದಿಂದ ಮಣಿಪುರದವರೆಗೆ ಹಬ್ಬಿದೆ.

ಇಲ್ಲಿ ಹಿಂದೂ, ಮುಸ್ಲಿಂ, ಸಿಖ್, ಇಸಾಯಿ, ಬೌದ್ಧ, ಜೈನ ಮುಂತಾದ ವಿವಿಧ ಮತದವರೂ ಇದ್ದಾರೆ. ಕನ್ನಡ, ಹಿಂದಿ, ಬಂಗಾಳಿ, ಪಂಜಾಬಿ, ಮರಾಠಿ, ತೆಲುಗು, ತಮಿಳು, ಮಲೆಯಾಳಿ ಭಾಷೆ ಮಾತನಾಡುವ ಜನರೂ ಇದ್ದಾರೆ. ಬಹುಧರ್ಮ, ಬಹುಭಾಷೆ, ಬಹುವೇಷ ಹೊಂದಿರುವ ದೊಡ್ಡ ದೇಶ ನಮ್ಮದು. ಈ ಜನ ಶಾಂತಿಪ್ರಿಯರು. ವಿಶಾಲ ಮನೋಭಾವದವರು. ಜಾತಿ-ಮತ-ಭಾಷೆ ಮೀರಿದವರು.

ಈ ದೇಶದಲ್ಲಿ ಗಂಗಾ, ಯಮುನಾ, ಸಿಂಧೂ, ಕಾವೇರಿ, ಕೃಷ್ಣೆ ಮುಂತಾದ ನದಿಗಳು ಹರಿಯುತ್ತಿವೆ. ಬದುಕಿನ ಭೂಮಿಗೆ ನೀರುಣಿಸುತ್ತಿವೆ. ಕರಾವಳಿಯು ಸಾಗರದ ಚೆಲುವಿನಿಂದ ತುಂಬಿದೆ. ದಕ್ಷಿಣಪೀಠಭೂಮಿ ಫಲವತ್ತಾದ ನಾಡು. ಅದನ್ನು ಪಶ್ಚಿಮ ಘಟ್ಟಗಳು, ಪೂರ್ವಘಟ್ಟಗಳು ಸುತ್ತುವರಿದಿವೆ. ಇದು ಹಚ್ಚಹಸಿರಿನ ಕಾಡು. ಇಲ್ಲಿ ಹುಲಿ, ಸಿಂಹ, ಆನೆಗಳು ಇವೆ.

'ಜನಗಣಮನ' ಇದು ನಮ್ಮ ರಾಷ್ಟ್ರಗೀತೆ. ಇದು ಭಾರತ ದೇಶವನ್ನು ಬಣ್ಣಿಸುತ್ತದೆ ಮತ್ತು ಭಾರತೀಯರಿಗೆ ಜಯವನ್ನು ಕೋರುತ್ತದೆ. 'ವಂದೇ ಮಾತರಂ' ನಮ್ಮ ದೇಶಭಕ್ತಿಗೀತೆ. ದೇಶ ಪ್ರೇಮ ಸಾರುವ ಗೀತೆಯಾಗಿದೆ.

ನಮ್ಮ ದೇಶದ ಬಾವುಟ ಮೂರು ಬಣ್ಣಗಳಿಂದ ಕೂಡಿದೆ. ಕೇಸರಿ ತ್ಯಾಗದ ಸಂಕೇತ. ಬಿಳಿ ಶಾಂತಿಯ ಪ್ರತೀಕ ಮತ್ತು ಹಸಿರು ಸಮೃದ್ಧಿಯ ಸೂಚಕ. ನಡುವೆ ಇರುವ ನೀಲಿ ಬಣ್ಣದ ಚಕ್ರ ನಮ್ಮ ಧರ್ಮಚಕ್ರ, ಪ್ರಗತಿಯ ಸಂಕೇತ. ಇದುವೆ ನಮ್ಮ ಹೆಮ್ಮೆಯ ಬಾವುಟ.

ಈ ನಾಡಿನ ರಕ್ಷಣೆಗಾಗಿ ಅನೇಕ ಜನ ಬಲಿದಾನ ಮಾಡಿದ್ದಾರೆ. ಕಿತ್ತೂರು ಚನ್ನಮ್ಮ, ರಾಣಿ ಲಕ್ಷ್ಮಿಬಾಯಿ, ಟಿಪ್ಪು ಸುಲ್ತಾನ, ಭಗತ್‌ಸಿಂಗ್, ಚಂದ್ರಶೇಖರ ಆಜಾದ ಪ್ರಮುಖರು. ಅನೇಕ ತಾಯಂದಿರು ದೇಶಕ್ಕಾಗಿ ತಮ್ಮ ಮಕ್ಕಳನ್ನೇ ಕೊಡುಗೆಯನ್ನಾಗಿ ನೀಡಿರುವರು. ವ್ಯಾಸ, ವಾಲ್ಮೀಕಿ, ಪಂಪ, ಹರಿಹರ, ರಾಘವಾಂಕ, ಕುಮಾರವ್ಯಾಸ ಮೊದಲಾದ ಕವಿಗಳ ಬೀಡಿದು. ಬುದ್ಧ, ಬಸವ, ಅಲ್ಲಮ, ಗಾಂಧಿ, ಅಂಬೇಡ್ಕರ್ ಮೊದಲಾದ ಮಹಾತ್ಮರ ನಾಡಿದು. ವಿವೇಕಾನಂದ, ಅರವಿಂದರ ಗೂಡಿದು. ಈ ನಾಡಿನ ರೈತ, ಈ ನಾಡಿನ ಸೈನಿಕ ನಮ್ಮ ದೇಶದ ಆಧಾರಸ್ತಂಭಗಳು.



## ಓದಿ ತಿಳಿ

ಪುರಾತನ-ಹಳೆಯ, ಪರ್ವತ-ದೊಡ್ಡ ಬೆಟ್ಟ, ಹಬ್ಬು-ಹರಡು, ಬಹು-ಅಧಿಕ, ಅನೇಕ, ವಿಶಾಲ - ದೊಡ್ಡದಾದ, ಅಗಲವಾದ, ಮನೋಭಾವ-ಮನಸ್ಸಿನ ಭಾವನೆ, ಮೀರಿದ-ದಾಟಿದ, ಕರಾವಳಿ-ಸಮುದ್ರದಂಡೆ, ಫಲವತ್ತಾದ-ಸಾರವತ್ತಾದ, ಘಟ್ಟ-ಬೆಟ್ಟಗಳ ಸಾಲು,

ಬಣ್ಣಿಸು–ಹೊಗಳು, ಕೋರು–ವಿನಂತಿಸು, ಬಾವುಟ–ಪತಾಕೆ, ಧ್ವಜ, ಸಂಕೇತ–ಗುರುತು, ಪ್ರತೀಕ–ಪ್ರತಿರೂಪ, ಚಿಹ್ನೆ, ಸುಳಿವು–ಸುಳುಹು, ಕುರುಹು, ಜಾಡು, ಬಲಿದಾನ–ಆಹುತಿಕೊಡು, ಬೀಡು–ಮನೆ, ನಾಡು–ದೇಶ.

## ಅಭ್ಯಾಸ

**೧. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ಪದ ಅಥವಾ ಒಂದು ವಾಕ್ಯದಲ್ಲಿ ಉತ್ತರಿಸಿ.**

ಅ) ನಮ್ಮ ದೇಶ ಯಾವುದು?

ಆ) ನಮ್ಮ ದೇಶಕ್ಕೆ ಭಾರತ ಎಂಬ ಹೆಸರು ಹೇಗೆ ಬಂತು?

ಇ) ಇಲ್ಲಿ ಹರಿಯುವ ನದಿಗಳು ಯಾವುವು?

ಈ) ನಮ್ಮಲ್ಲಿ ಇರುವ ಪ್ರಮುಖ ಕಾಡುಪ್ರಾಣಿಗಳು ಯಾವುವು?

ಉ) ನಮ್ಮ ರಾಷ್ಟ್ರಗೀತೆ ಯಾವುದು?

ಊ) ಇಲ್ಲಿಯ ಜನ ಯಾವುದಕ್ಕಾಗಿ ಬಲಿದಾನ ಮಾಡಿದ್ದಾರೆ?



**೨. ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿ.**

ಅ) ಭಾರತದಲ್ಲಿ ಯಾವ ಯಾವ ಧರ್ಮದವರಿದ್ದಾರೆ?

ಆ) ಇಲ್ಲಿಯ ಜನ ಯಾವ ಯಾವ ಭಾಷೆಗಳನ್ನಾಡುತ್ತಾರೆ?

ಇ) ನಮ್ಮ ನಾಡಿನ ವೀರಯೋಧರ ಐದು ಹೆಸರುಗಳನ್ನು ತಿಳಿಸಿರಿ.

ಈ) ನಮ್ಮ ದೇಶದ ಕವಿಗಳು–ಸಂತರು ಯಾರು ಯಾರು?

ಉ) ನಮ್ಮ ದೇಶದಲ್ಲಿ ಆಗಿಹೋದ ಮಹಾತ್ಮರು ಯಾರು ಯಾರು?

**೩. ಈ ಕೆಳಗಿನ ವಾಕ್ಯಗಳನ್ನು ಸರಿಗೊಳಿಸಿ.**

ಅ) ನಮ್ಮ ದೇಶದ ದಕ್ಷಿಣಕ್ಕೆ ಹಿಮಾಲಯ ಪರ್ವತ ಇದೆ.

ಆ) ದಕ್ಷಿಣ ಪೀಠಭೂಮಿಯನ್ನು ಸಮುದ್ರಗಳು ಸುತ್ತುವರಿದಿವೆ.

ಇ) ನಮ್ಮದು ಬಹುಭಾಷೆ ಹೊಂದಿರುವ ಸಣ್ಣ ದೇಶ.

**೪. ಹೊಂದಿಸಿ ಬರೆಯಿರಿ.**

| | ಅ | | ಆ | |
|---|---|---|---|---|
| ಅ) | ಹಿಮಾಲಯ | ೧) | ನದಿ | ...................... |
| ಆ) | ಕನ್ನಡ | ೨) | ಕಾಡು | ...................... |
| ಇ) | ಕಾವೇರಿ | ೩) | ಪರ್ವತ | ...................... |
| ಈ) | ಹಚ್ಚ ಹಸಿರಿನ | ೪) | ಮಹಾರಾಜ | ...................... |
| ಉ) | ಭರತ | ೫) | ಭಾಷೆ | ...................... |

**೫. ಕೆಳಗಿನ ಪದಗಳನ್ನು ಸ್ವಂತವಾಕ್ಯಗಳಲ್ಲಿ ಬಳಸಿ.**

ಅ) ಪುರಾತನ: ........................................................................................

ಆ) ಸುತ್ತುವರೆ : ........................................................................................

ಇ) ಹಚ್ಚ ಹಸಿರು: ........................................................................................

ಈ) ಬಲಿದಾನ: ........................................................................................

ಉ) ಬೀಡು: ........................................................................................

**೬. ಈ ಕೆಳಗೆ ನೀಡಿದ ಸುಳಿವು ಪದಗಳಲ್ಲಿ ಸರಿಯಾದ ಪದವನ್ನು ಆರಿಸಿ ಬಿಟ್ಟ ಸ್ಥಳ ತುಂಬಿರಿ.**

ಅ) ನಮ್ಮ ಬಾವುಟ ................................ ಬಣ್ಣಗಳಿಂದ ಕೂಡಿದೆ.

ಆ) ಕೇಸರಿ ಬಣ್ಣ ................................ ದ ಸಂಕೇತ.

ಇ) ನಮ್ಮ ಬಾವುಟದ ಬಿಳಿ ಬಣ್ಣ ................................ ಯ ಪ್ರತೀಕ.

ಈ) ಹಸಿರು ಬಣ್ಣ ................................ ಯ ಸೂಚಕ.

(ಸುಳಿವು : ಪ್ರಗತಿ , ತ್ಯಾಗ, ಮೂರು, ಶಾಂತಿ, ಧರ್ಮ, ಸಮೃದ್ಧಿ)

೭. ಇವು ನಮ್ಮ ರಾಷ್ಟ್ರೀಯ ಹೆಗ್ಗುರುತುಗಳು: ಈ ಚಿತ್ರಗಳನ್ನು ಗಮನಿಸಿ ಬರೆ.







........................ ........................ ........................





........................ ........................



೮. ಒಂದರ ಹೋಲಿಕೆಯಂತೆ ಇನ್ನೊಂದು ಹೆಸರು ಬರೆ.

**ಮಾದರಿ : ಕಿತ್ತೂರು ಚನ್ನಮ್ಮ : ಝಾನ್ಸಿ ರಾಣಿ ಲಕ್ಷ್ಮಿಬಾಯಿ**

ಅ) ಬುದ್ಧ : ..................................

ಆ) ಭಗತಸಿಂಗ್ : ..................................

ಇ) ಪಶ್ಚಿಮ ಘಟ್ಟಗಳು : ..................................

ಈ) ಗಂಗಾನದಿ : ..................................

ಉ) ಜನಗಣಮನ : ..................................

ಊ) ವಿವೇಕಾನಂದ : ..................................

## ೯. ಈ ಪದಗಳನ್ನು ಓದುತ್ತಾ ಬರೆ.

ಅ)

| ಕನ್ನಡ | ದೊಡ್ಡ | ಮಕ್ಕಳು | ಘಟ್ಟ | ಸುತ್ತುವರೆ |
|---|---|---|---|---|
| | | | | |
| | | | | |
| | | | | |
| | | | | |

ಅ)

| ಬಣ್ಣ | ಅಲ್ಲಮ | ಅಬ್ಬಕ್ಕ | ಹಚ್ಚಹಸಿರು | ಕಿತ್ತೂರು |
|---|---|---|---|---|
| | | | | |
| | | | | |
| | | | | |
| | | | | |

ಇ)

| ಕಾಶ್ಮೀರ | ಕನ್ಯಾಕುಮಾರಿ | ಧರ್ಮ | ಕೃಷ್ಣ | ರಾಷ್ಟ್ರ |
|---|---|---|---|---|
| | | | | |
| | | | | |
| | | | | |
| | | | | |

## ೧೦. ಈ ಪದ್ಯವನ್ನು ರಾಗಬದ್ಧವಾಗಿ ಹೇಳಿ.

### ದೇಶಪ್ರೇಮ

ಭರತದೇಶ ನನ್ನ ದೇಶ
ಭಕ್ತಿಯಿಂದ ನಮಿಸುವೆ
ವೈರಿಜನರ ಬಗ್ಗುಬಡಿದು
ದೇಶ ಹಿತವ ಕಾಯುವೆ ॥ ೧ ॥

ದೇಶಕ್ಕಾಗಿ ಪ್ರಾಣತೆತ್ತ
ಯೋಧರನ್ನು ನೆನೆಯುವೆ ।
ಬುದ್ಧ, ಗಾಂಧಿ ಹಾಕಿಕೊಟ್ಟ
ಮಾರ್ಗದಲ್ಲಿ ನಡೆಯುವೆ ॥ ೨ ॥

ದೇಶದೇಳ್ಗೆಗಾಗಿ ದುಡಿವ
ಜನರ ಜೊತೆ ಸೇರುವೆ ।
ಭಾಷೆ ದ್ವೇಷ ಬೇಡವೆಂದು
ಎಲ್ಲರೊಂದೆ ಎನ್ನುವೆ ॥ ೩ ॥

ಸತ್ಯ ಶಾಂತಿ ನಾಡು ಎಂದು
ಎದೆಯ ತಟ್ಟಿ ಹೇಳುವೆ ।
ದೇಶ ಸೇವೆಗಾಗಿ ನಾನು
ಪ್ರಾಣ ತ್ಯಾಗ ಮಾಡುವೆ ॥ ೪ ॥

– ನೀಲವಾರ ಸುರೇಂದ್ರ ಅಡಿಗ



**ಪ್ರಶ್ನೆಗಳಿಗೆ ಉತ್ತರಿಸಿ:**

ಅ) ಯಾರನ್ನು ಬಗ್ಗು ಬಡಿದು ದೇಶದ ಹಿತ ಕಾಯುವೆ?

.................................................................................................

ಆ) ಯಾರನ್ನು ನೀನು ನೆನೆಯುವೆ?

.................................................................................................

ಇ) ಯಾರು ಹಾಕಿಕೊಟ್ಟ ಮಾರ್ಗದಲ್ಲಿ ನಡೆಯುವೆ?

.................................................................................................

ಈ) ಎಂತಹವರ ಜೊತೆ ಸೇರಬೇಕು?

.................................................................................................

ಉ) ದೇಶ ಸೇವೆಗಾಗಿ ಏನನ್ನು ಮಾಡಲು ಸಿದ್ಧರಾಗಬೇಕು?

.................................................................................................



# ಗದ್ಯ ಪಾಠ – ೩

## ನವಿಲು



ಜುಳು ಜುಳು ಹರಿಯುವ ನದಿ. ಹಚ್ಚ ಹಸಿರಿನ ಮೈದಾನ. ಕರಿಮೋಡದ ಅಲೆಗಳು. ತಣ್ಣನೆಯ ಗಾಳಿ. ಆಕಾಶದಲ್ಲಿ ಬಣ್ಣ ಬಣ್ಣದ ಕಾಮನಬಿಲ್ಲು. ಜಿನುಗುವ ಸೋನೆ ಮಳೆ. ಆಗ ಹಕ್ಕಿಯೊಂದು ರೆಕ್ಕೆ ಬಿಚ್ಚಿ ಕುಣಿಯಲು ಆರಂಭಿಸಿತು. ಉದ್ದವಾದ ಗರಿ ಕೆದರಿತು. ಅದು ಬಣ್ಣ ಬಣ್ಣದ ಬೀಸಣಿಕೆಯಂತೆ ಕಾಣುತ್ತಿದೆ. ಕತ್ತನ್ನು ಅತ್ತ ಇತ್ತ ತಿರುಗಿಸುತ್ತಿದೆ. ಅದರ ಗರಿಗಳಲ್ಲಿ ಸಾವಿರಾರು ಕಣ್ಣುಗಳು. ಅವು ಫಳ ಫಳ ಹೊಳೆಯುತ್ತಿವೆ. ಅದು ಥಕ ಥೈ ಎಂದು ಕುಣಿಯುತ್ತಿದೆ. ಅದರ ಸುಂದರತೆಯನ್ನು ರಂಗು ರಂಗಿನ ತುರಾಯಿ ಹೆಚ್ಚಿಸಿದೆ. ಯಾವುದೀ ಹಕ್ಕಿ? ಅದೇ ನವಿಲು ಅಲ್ಲವೇ?



ನವಿಲನ್ನು ಮಯೂರ, ಶಿಖಿ, ಸಹಸ್ರಾಕ್ಷ ಎಂದು ಕರೆಯುತ್ತಾರೆ. ನವಿಲುಗರಿಯಲ್ಲಿ ಹೊಳಪುಳ್ಳ ಕಣ್ಣಿದೆ. ಅದು ಹಸಿರು ಮಿಶ್ರಿತ ನೀಲಿ ಬಣ್ಣದಿಂದ ಸಿಂಗಾರ ಗೊಂಡಿದೆ. ಅದರ ಸುತ್ತ ತಾಮ್ರ ಮಿಶ್ರಿತ ಬಂಗಾರ ವರ್ಣದ ಉಂಗುರ ಚಮಕಿಸುತ್ತಿದೆ. ಈ ಗರಿಯ ನೋಟ ಮನಸ್ಸನ್ನು ಸೆಳೆಯುತ್ತಿದೆ. ಅದಕ್ಕೆ ಇದನ್ನು ಸಾವಿರ ಕಣ್ಣುಳ್ಳ ಸಹಸ್ರಾಕ್ಷ ಎಂದು ಕರೆಯುತ್ತಾರೆ.

ಕವಿಗಳು ಅದರ ರೂಪ ಲಾವಣ್ಯಕ್ಕೆ ಮನಸೋತಿದ್ದಾರೆ. ಅನೇಕರು ಕವಿತೆ ರಚಿಸಿದ್ದಾರೆ. ಇದು ಸೌಂದರ್ಯದ ಸಂಕೇತ. ಆದಕಾರಣವೇ ಇದು 'ರಾಷ್ಟ್ರಪಕ್ಷಿ' ಎಂಬ ಗೌರವ ಹೊಂದಿದೆ. ಇದನ್ನು ಹಿಂಸಿಸುವುದು, ಕೊಲ್ಲುವುದು ಅಪರಾಧವಾಗಿದೆ.

ನವಿಲು ಷಣ್ಮುಖನ ವಾಹನ. ನವಿಲು ಗರಿ ಮುರಳಿ ಮೋಹನನ ಜುಟ್ಟಿನ ಅಲಂಕಾರವೂ ಅಹುದು. ನವಿಲಿನ ನರ್ತನ ಕಂಡ ಕಲಾವಿದರು, ಮಯೂರ ನಾಟ್ಯವೆಂಬ ಕಲಾಪ್ರಕಾರವನ್ನೇ ಮಾಡಿದ್ದಾರೆ. ನವಿಲಿನ ಕುಣಿತ ನಯನ ಮನೋಹರ. ಹೆಣ್ಣಿಗಿಲ್ಲದ ರೂಪ ಗಂಡಿಗಿದೆ. ಇದೆ ನವಿಲಿನ ವಿಶೇಷ ! ಹೆಣ್ಣು ನವಿಲಿನ ಪುಕ್ಕಗಳು ಚಿಕ್ಕವು.

ನವಿಲು ಜಗತ್ತಿನ ಎಲ್ಲ ಪ್ರದೇಶಗಳಲ್ಲಿ ವಾಸಿಸುತ್ತದೆ. ಭಾರತ ಮತ್ತು ಶ್ರೀಲಂಕಾ ದೇಶಗಳಲ್ಲಿ ನವಿಲಿನ ಬಣ್ಣ ನೀಲಿ ಛಾಯೆ, ಜಾವ ಮತ್ತು ಮಯನ್ಮಾರ ದೇಶಗಳಲ್ಲಿ ಹಸಿರು ಛಾಯೆ ಹೊಂದಿರುತ್ತದೆ. ಇವು ಹಿಂಡು ಹಿಂಡಾಗಿ ವಾಸಿಸುತ್ತವೆ. ಇವು ೧೫ ವರ್ಷ ಜೀವಿಸಬಲ್ಲವು. ಗುಡ್ಡದ ಹುಲ್ಲುಗಾವಲುಗಳಲ್ಲಿ, ನದಿ, ಕೆರೆ, ಹೊಳೆ,ಹಳ್ಳ ಇರುವಲ್ಲಿ ಹೆಚ್ಚು ಇರುತ್ತವೆ.

ನವಿಲು ನೋಡಲು ಎಷ್ಟು ಸುಂದರವೋ ಅಷ್ಟೇ ಶಿಸ್ತಿನ ಸಿಪಾಯಿ ; ಉಪಕಾರಿಯೂ ಹೌದು. ಇದು ರೈತ ಮಿತ್ರ. ಬೆಳೆದ ಫಸಲಿಗೆ ಕೀಟಬಾಧೆ ತಗುಲದಂತೆ ಬೆಳೆಗಳ ರಕ್ಷಣೆ ಮಾಡುತ್ತದೆ. ಕೀಟಗಳನ್ನು ತಿನ್ನುತ್ತದೆ. ನವಿಲು ಇರುವ ಪ್ರದೇಶದಲ್ಲಿ ಹಾವುಗಳು ಸುಳಿಯಲಾರವು.

## ಓದಿ–ತಿಳಿ

ಅಲೆ–ತೆರೆ, ಜಿನಗು–ತೊಟ್ಟಿಕ್ಕು, ನರ್ತನ–ಕುಣಿತ, ಕತ್ತು–ಕೊರಳು, ಕೊಂಕು–ಡೊಂಕು, ತುರಾಯಿ–ಜುಟ್ಟು, ಕಮಾನು – ಅರ್ಧಚಂದ್ರಾಕೃತಿಯ ರಚನೆ, ಚಮಕಿಸು–ಹೊಳಪು, ಮನೋಹರ–ಸುಂದರ, ಛಾಯೆ–ನೆರಳು, ಆವಾಸ–ನೆಲೆ, ಮನೆ.



## ಗಮನಿಸಿ ತಿಳಿ

ಶಿಖೆ/ ಶಿಖಿ :– ನವಿಲುಗಳ ತಲೆಯ ಮೇಲೆ ನೇರವಾಗಿ ನಿಂತಿರುವ ಹಸಿರು ಅಥವಾ ನೀಲಿಯ ಬಣ್ಣದ ತೆಳ್ಳನೆ ತುರಾಯಿ, ಗರಿಗಳಿಂದ ಕೂಡಿದ ಜುಟ್ಟು.

ರಾಷ್ಟ್ರಪಕ್ಷಿ :– ರಾಷ್ಟ್ರಗೌರವಕ್ಕೆ ಪಾತ್ರವಾದ ಪಕ್ಷಿ.

ಹಿಂಡು ಹಿಂಡಾಗಿ :– ಗುಂಪು ಗುಂಪಾಗಿ

## ಅಭ್ಯಾಸ

### ೧. ಒಂದು ವಾಕ್ಯದಲ್ಲಿ ಉತ್ತರಿಸಿರಿ.

ಅ) ನವಿಲು ಕೊರಳನ್ನು ಕೊಂಕಿಸುವ ರೀತಿ ಹೇಳಿ.

ಆ) ನವಿಲು ಹೆಜ್ಜೆ ಹಾಕುವ ರೀತಿ ತಿಳಿಸಿರಿ.

ಇ) ನವಿಲಿನ ಇತರ ಹೆಸರುಗಳಾವುವು?

ಈ) ನವಿಲು ಯಾರ ಮನಸ್ಸನ್ನು ಸೂರೆಗೊಂಡಿದೆ?

ಉ) ನವಿಲಿಗೆ ಭಾರತ ಸರಕಾರ ನೀಡಿರುವ ಗೌರವವೇನು?

## ೨. ಎರಡು –ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

ಅ) ನವಿಲು ಕುಣಿಯುವ ಬಗೆ ತಿಳಿಸಿ.

ಆ) ನವಿಲಿನ ಗರಿಯನ್ನು ವರ್ಣಿಸಿರಿ.

ಇ) ನವಿಲನ್ನು ಸಹಸ್ರಾಕ್ಷ ಎಂದು ಏಕೆ ಕರೆಯುವರು ?

ಈ) ನವಿಲು ಎಲ್ಲಿ ವಾಸಿಸುತ್ತದೆ ?

ಉ) ನವಿಲು ರೈತರ ಮಿತ್ರ ಏಕೆ ?

## ೩. ಹೊಂದಿಸಿ ಬರೆಯಿರಿ.

| | ಅ | | ಆ | |
|---|---|---|---|---|
| ಅ) | ರೈತಮಿತ್ರ | ೧) | ಹೊಳಪು | ................................ |
| ಆ) | ತುರಾಯಿ | ೨) | ನವಿಲು | ................................ |
| ಇ) | ಮನೋಹರ | ೩) | ಕಾಮನಬಿಲ್ಲು | ................................ |
| ಈ) | ಆಕಾಶ | ೪) | ಜುಟ್ಟು | ................................ |
| ಉ) | ಚಮಕಿಸು | ೫) | ಸುಂದರ | ................................ |



## ೪. ಈ ಪದಗಳನ್ನು ಸ್ವಂತವಾಕ್ಯಗಳಲ್ಲಿ ಉಪಯೋಗಿಸಿ.

ಅ) ಹಚ್ಚ ಹಸಿರು : ...........................................................................

ಆ) ಮೈದಾನ : ...........................................................................

ಇ) ಸುಂದರ : ...........................................................................

ಈ) ಸಂಕೇತ : ..........................................................................

ಉ) ವಾಸಿಸು : ..........................................................................

## ೫. ಸಮನಾರ್ಥಕ ಪದ ಬರೆಯಿರಿ.

**ಮಾದರಿ :– ನೃತ್ಯ– ನರ್ತನ, ಕುಣಿತ**

ಅ) ನಯನ = ................. .................

ಆ) ನವಿಲು = ................. .................

ಇ) ಲಾವಣ್ಯ = ................. .................

ಈ) ರೆಕ್ಕೆ = ................. .................

ಉ) ಬಂಗಾರ = ................. .................

## ೬. ಟಿಪ್ಪಣಿ ಬರೆಯಿರಿ.

ಅ) ನವಿಲಿನ ನರ್ತನ

________________________________________

________________________________________

________________________________________



## ೭. ಕೆಳಗೆ ಕೊಟ್ಟ ನಾಲ್ಕು ಉತ್ತರಗಳಲ್ಲಿ ಸರಿಯಾದ ಪದವನ್ನು ಆರಿಸಿ ಬರೆಯಿರಿ.

**ಮಾದರಿ: ನದಿಯ ಧ್ವನಿ ............................ ಅ) <u>ಜುಳು ಜುಳು</u>**

ಅ) ಜುಳು ಜುಳು ಬ) ಫಳ ಫಳ ಕ) ತಳ ತಳ ಡ) ಬರ ಬರ

೧) ಷಣ್ಮುಖನ ವಾಹನ ............................

ಅ) ನಂದಿ ಬ) ಕುದುರೆ ಕ) ನವಿಲು ಡ) ಗರುಡ

೨) ನವಿಲು ನೋಡಲು ಎಷ್ಟು ಸುಂದರವೋ ಅಷ್ಟೇ ............................

ಅ) ಶಿಸ್ತಿನ ಸಿಪಾಯಿ ಬ) ಮಸ್ತಿಯ ಸಿಪಾಯಿ

ಕ) ಚೇಷ್ಟೆಯ ಸಿಪಾಯಿ ಡ) ಸಿಟ್ಟಿನ ಸಿಪಾಯಿ

೩)   ನವಿಲು ಇರುವ ಪ್ರದೇಶದಲ್ಲಿ ಇವು ಸುಳಿಯಲಾರವು ............................

ಅ) ಹಕ್ಕಿಗಳು    ಬ) ಕೀಟಗಳು   ಕ) ಹಾವುಗಳು   ಡ) ಮೊಲಗಳು

೪)   ನವಿಲಿಗೆ ಹಸಿರು ಛಾಯೆ ಈ ದೇಶಗಳಲ್ಲಿ ಇರುತ್ತದೆ ............................

ಅ) ಕೀನ್ಯಾ ಮತ್ತು ಜಪಾನ    ಬ) ಅಮೇರಿಕ ಮತ್ತು ಇಂಗ್ಲೆಂಡ

ಕ) ಜಾವಾ ಮತ್ತು ಮಯನ್ಮಾರ್   ಡ) ಸಿಲೋನ ಮತ್ತು ಭಾರತ

## ೮.   ವಿರುದ್ಧಾರ್ಥಕ ಪದ ಓದಿ ಗಮನಿಸಿ.

| | | |
|---|---|---|
| ಹಿಂಸೆ | X | ಅಹಿಂಸೆ |
| ಆರಂಭಿಸು | X | ಮುಕ್ತಾಯಗೊಳಿಸು |
| ಹೊಗಳು | X | ತೆಗಳು |
| ಶಿಸ್ತು | X | ಅಶಿಸ್ತು |



## ೯.   ಈ ಪದಗಳನ್ನು ಗಟ್ಟಿಯಾಗಿ ಉಚ್ಚರಿಸಿ ಬರೆಯಿರಿ.

ಹಚ್ಚಹಸಿರು   ತಣ್ಣನೆಯ   ಗಾಳಿ   ಪುಕ್ಕಗಳು   ಬಣ್ಣಬಣ್ಣ   ಕಣ್ಣುಳ್ಳ

..........................................................................................

..........................................................................................

..........................................................................................

ತಾಮ್ರ   ಷಣ್ಮುಖ   ರಾಷ್ಟ್ರಪಕ್ಷಿ   ಸಹಸ್ರಾಕ್ಷ   ನಾಟ್ಯ

..........................................................................................

..........................................................................................

..........................................................................................

## ೧೦. ಇವುಗಳನ್ನು ಓದಿರಿ.

### ಅ) ವರ್ಣಮಾಲೆ

ಅ ಆ ಇ ಈ ಉ ಊ ಋ ಎ ಏ ಐ ಒ ಓ ಔ ಅಂ ಅಃ
ಕ ಖ ಗ ಘ ಙ
ಚ ಛ ಜ ಝ ಞ
ಟ ಠ ಡ ಢ ಣ
ತ ಥ ದ ಧ ನ
ಪ ಫ ಬ ಭ ಮ
ಯ ರ ಲ ವ ಶ ಷ ಸ ಹ ಳ

### ಆ) ಮೂಲಾಕ್ಷರಗಳನ್ನು ಸರಿಯಾಗಿ ಗಮನಿಸಿ ಉಚ್ಚರಿಸಿರಿ.

**ಅ ಆ ಇ ಈ ಉ ಊ ಋ ಎ ಏ ಐ ಒ ಓ ಔ** – ಇವು ಸ್ವರಗಳು = ೧೩
**ಅಂ ಅಃ** – ಯೋಗವಾಹಗಳು = ೦೨
**ಕ್ ಖ್ ಗ್ ಘ್ ಙ್**
**ಚ್ ಛ್ ಜ್ ಝ್ ಞ್**
**ಟ್ ಠ್ ಡ್ ಢ್ ಣ್**
**ತ್ ಥ್ ದ್ ಧ್ ನ್**
**ಪ್ ಫ್ ಬ್ ಭ್ ಮ್** – ಇವು ವರ್ಗೀಯ ವ್ಯಂಜನಗಳು = ೨೫
**ಯ್ ರ್ ಲ್ ವ್ ಶ್, ಷ್, ಸ್, ಹ್, ಳ್** – ಇವು ಅವರ್ಗೀಯ ವ್ಯಂಜನಗಳು =೦೯

**ಕನ್ನಡ ವರ್ಣಮಾಲೆ ಒಟ್ಟು = ೪೯**



### ಇ) ಗುಣಿತಾಕ್ಷರಗಳು ರೂಪುಗೊಳ್ಳುವ ಬಗೆ :

ಕ್ + ಅ = ಕ
ಕ್ + ಆ = ಕಾ
ಕ್ + ಇ = ಕಿ
ಕ್ + ಈ = ಕೀ
ಕ್ + ಉ = ಕು
ಕ್ + ಊ = ಕೂ
ಕ್ + ಋ = ಕೃ
ಕ್ + ಎ = ಕೆ
ಕ್ + ಏ = ಕೇ
ಕ್ + ಐ = ಕೈ
ಕ್ + ಒ = ಕೊ
ಕ್ + ಓ = ಕೋ
ಕ್ + ಔ = ಕೌ
ಕ್ + ಅಂ = ಕಂ
ಕ್ + ಅಃ = ಕಃ

### ಈ) ಇವುಗಳ ಗುಣಿತಾಕ್ಷರ ಬರೆಯಿರಿ.

ಯ್ + ಅ ..........................
ಲ್ + ಉ ..........................
ರ್ + ಆ ............................
ಜ್ + ಐ ..........................

## ೧೧. ಸನ್ನಿವೇಶಕ್ಕೆ ತಕ್ಕ ಧ್ವನಿ ಉಚ್ಚರಿಸಿ ಬರೆಯಿರಿ.

**ಮಾದರಿ – ರೈಲು ಓಡುವಾಗ :– ಚುಕು ಬುಕು ಚುಕು ಬುಕು**

ಅ) ಮಳೆ ಜೋರಾಗಿ ಬರುವಾಗ ..........................

ಆ) ಗುಡುಗಿನ ಧ್ವನಿ ..........................

ಇ) ಹಕ್ಕಿಗಳ ಧ್ವನಿ ..........................

ಈ) ಸಂಗೀತದ ಸ್ವರಗಳು ..........................

ಇ) ನದಿ ಶಾಂತವಾಗಿ ಹರಿಯುವಾಗ ..........................

## ೧೨. ಈ ಪದಗಳನ್ನು ಸರಿಯಾಗಿ ಉಚ್ಚರಿಸಿ, ವ್ಯತ್ಯಾಸ ತಿಳಿಯಿರಿ.

| | | | | | | | |
|---|---|---|---|---|---|---|---|
| ಅ) | ಶಂಕರ | – | ಸಂಕರ | ಉ) | ಧನ | – | ದನ |
| ಆ) | ಷಣ್ಮುಖ | – | ಸಣ್ಮುಕ | ಊ) | ಥಕ ಥೈ | – | ತಕ ತೈ |
| ಇ) | ಝರಿ | – | ಜರಿ | ಋ) | ಘಮ ಘಮ | – | ಗಮ ಗಮ |
| ಈ) | ಫಲ | – | ಪಲ | ಎ) | ಹಾಲು | – | ಆಲು |

## ೧೩. ಈ ಹಾಡನ್ನು ಎಲ್ಲರೂ ಕೂಡಿ ಹಾಡಿ ನಲಿಯಿರಿ.

**ಅ)** 

### ನವಿಲು

ನವಿಲೆ ನವಿಲೆ
ನೀಲಿಯ ನವಿಲೆ
ಕಣ್ಣನು ಎಣಿಸುವೆ ಬಾ ಇಲ್ಲಿ
ಸಾವಿರ ಕಂಗಳ
ಹೊಳಪನು ತೋರುತ
ಓಡುವೆ ಏಕೆ ನೀ ಅಲ್ಲಿ ॥೧॥

ನಿನ್ನಯ ಕೊರಳಿನ
ಬಣ್ಣವ ತುಂಬಿದೆ
ಸುಂದರ ನೀಲಿಯ ಬೆಳಕನ್ನು
ನಿನ್ನನು ಮಾಡಿದ
ಕೈಗಳ ಚೆಲುವು
ಎಲ್ಲಿ ಅಡಗಿದೆ ಹೇಳಿನ್ನು ॥೨॥

ಅತ್ತಲು ಇತ್ತಲು
ಕತ್ತನು ತಿರುಗಿಸಿ
ಕರೆಯುವೆ ಯಾರನು ಆಟಕ್ಕೆ
ಹಾಲಿನ ಜೊತೆಯಲಿ
ಹಣ್ಣನು ನೀಡುವೆ
ಮರೆಯದೇ ಬಾ ನೀ ಊಟಕ್ಕೆ ॥೩॥

**– ಅಯ್ಯಪ್ಪಯ್ಯ ಹುಡಾ**

ಆ) ಇದರಲ್ಲಿರುವ ಪಕ್ಷಿಗಳನ್ನು ಪತ್ತೆ ಹಚ್ಚಿ. ಎಡಕ್ಕೂ, ಬಲಕ್ಕೂ ಮೇಲಕ್ಕೂ, ಕೆಳಕ್ಕೂ ಅಕ್ಷರಗಳಲ್ಲಿ ಜೋಡಿಸಿ.

ಉದಾ : ನವಿಲು

| ನೀ | ಬಾ | ದಾ | ನಾ | ರಿ | ಮೈ | ನಾ | ಹ | ಕ್ಕಿ |
|---|---|---|---|---|---|---|---|---|
| ಸು | ಕೋ | ಗಿ | ಲೆ | ಕೋ | ಹಾ | ಕೋ | ಳಿ | ಸಾ |
| ನೀ | ಬಾ | ದಾ | ನಾ | ರಿ | ಮೈ | ನಾ | ಹ | ಕ್ಕಿ |
| ಲ | ಗೊ | ರ | ವಂ | ಕ | ದಾ | ಪಾ | ಚಿ | ಗೂ |
| ಪಾ | ರು | ಗೆ | ನ | ಕೊ | ಕ್ಕ | ರೆ | ಯ | ಬೆ |
| ಳಿ | ಗು | ಕ್ಕಿ | ಗೀ | ವಿ | ದಾ | ಸಾ | ಗಿ | ರಾ |
| ಕೋ | ಬ್ಬ | ಹ | ಜ | ರೆಂ | ಲು | ಮ | ಳಿ | ಜ |
| ತು | ಚ್ಚಿ | ಮ | ಗ | ಬೆ | ರೆ | ರಾ | ಣಿ | ನ |
| ಬಾ | ಳು | ಪಾ | ರಿ | ವಾ | ಳ | ಯ | ಗೆ | ಕಾ |
| ರ | ಣ | ಹ | ದ್ದು | ಸ | ಕು | ಮ | ಜ್ಜೆ | ಳಿ |





## ಪದ್ಯ ಪಾಠ – ೪

# ಗೂಡಿನಿಂದ ಬಾನಿನೆಡೆಗೆ



ಗೂಡಿನಿಂದ ಬಾನಿನೆಡೆಗೆ
ಹಕ್ಕಿ ಹಾರಿತು ।
ರೆಕ್ಕೆ ಬಡಿದು ಬಡಿದು ಹಕ್ಕಿ
ಮೇಲಕೇರಿತು ॥ ೧ ॥

ಮೇಲ ಮೇಲಕೇರಿ ಹಕ್ಕಿ
ಕೆಳಗೆ ನೋಡಿತು !
ಹಳ್ಳಕೊಳ್ಳ ಹಸಿರು ಬೆಟ್ಟ
ಕಂಡು ಹಾಡಿತು ॥ ೨ ॥

ಏನು ಅಂದ ಏನು ಚಂದ
ಗೂಡಿನಾಚೆಗೆ ।
ಗೂಡು ತೊರೆದು ಹಾರಬೇಕು
ನಿತ್ಯ ಬಾನಿಗೆ ॥ ೩ ॥

ಸಗ್ಗ ಸುಖವು ಕಂಡ ಹಾಗೆ
ಹಿಗ್ಗಿ ಆಡಿತು !
ಆಡಿ ಆಡಿ ಹಕ್ಕಿ ಮರಳಿ
ಗೂಡು ಸೇರಿತು ॥ ೪ ॥

ಅಮ್ಮ ಮರಳಿ ಮನೆಗೆ ಬರಲು
ಹಿಗ್ಗಿ ಹೇಳಿತು !
ಆಡಿ ಬಂದೆ ಗೂಡಿನಾಚೆ
ಎಂದು ನಕ್ಕಿತು ॥ ೫ ॥

ತೀರಲಿಲ್ಲ ಕಂದ ನೀನು
ನೋಡು ತಾಣವು
ಬೆಳೆದ ಮೇಲೆ ತಿಳಿವುದಾಗ
ಜಗದ ಲೀಲೆಯು ॥ ೬ ॥

– ಪ. ಗು. ಸಿದ್ಧಾಪುರ



## ಕವಿ ಪರಿಚಯ : ಪ. ಗು. ಸಿದ್ದಾಪುರ

ಇವರು ವಿಜಾಪುರ ಜಿಲ್ಲೆಯ ದಾಶಾಳ ಗ್ರಾಮದವರು. ಮಕ್ಕಳ ಕವಿಗಳೆಂದು ಹೆಸರು ಪಡೆದಿರುವ ಇವರು ರಾಜ್ಯ ಶಿಕ್ಷಕ ಪ್ರಶಸ್ತಿ ಪುರಸ್ಕೃತ ಚಿತ್ರಕಲಾ ಶಿಕ್ಷಕರು. ಮಕ್ಕಳ ಸಾಹಿತಿಯಾದ ಇವರು ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತರು. ಮಕ್ಕಳ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ.

ಮರಿಹಕ್ಕಿಯು ಗೂಡಿನಿಂದ ಆಕಾಶಕ್ಕೆ ಹಾರುತ್ತದೆ. ಅಲ್ಲಿಂದ ಹಳ್ಳ-ಕೊಳ್ಳ ನೋಡುತ್ತದೆ. ಗೂಡಿನಾಚೆಗೆ ಏನು ಚಂದ ಏನು ಅಂದ ಎಂದು ಭಾವಾವೇಶಕ್ಕೆ ಒಳಗಾಗುತ್ತದೆ. ಸ್ವರ್ಗದ ಸುಖ ಕಂಡಷ್ಟು ಸುಖ ಅನುಭವಿಸುತ್ತದೆ. ತಾಯಿಗೆ ಇದನ್ನು ಹೇಳಿದಾಗ, ಮಗುವೆ ನೀನು ನೋಡುವ ಸ್ಥಳಗಳು ಮುಗಿದಿಲ್ಲ. ಬೆಳೆದ ಮೇಲೆ ಈ ಜಗದ ಲೀಲೆ ನೋಡು ಎನ್ನುತ್ತದೆ.

### ಓದಿ-ತಿಳಿ

ಬಾನು - ಆಗಸ, ಆಕಾಶ, ಬೆಟ್ಟ - ಗುಡ್ಡ, ಪರ್ವತ, ತೊರೆ - ಬಿಡು, ನಿತ್ಯ - ಪ್ರತಿದಿನ, ಸಗ್ಗ - ಸ್ವರ್ಗ, ಹಿಗ್ಗು - ಸಂತೋಷ, ಮರಳಿ - ಹಿಂತಿರುಗಿ, ತೀರು - ಮುಗಿ, ತಾಣ - ಜಾಗ, ಸ್ಥಾನ, ಲೀಲೆ - ಆಟ, ವಿನೋದ, ಜಗ - ಜಗತ್ತು, ಪ್ರಪಂಚ.



### ಗಮನಿಸಿ-ತಿಳಿ

ಗೂಡು - ಹಕ್ಕಿಗಳ ವಾಸದ ನೆಲೆ

ಹಳ್ಳಕೊಳ್ಳ - ತಗ್ಗು/ಕಣಿವೆ, ಕೊರಕಲು

ಹಸಿರುಬೆಟ್ಟ - ಸಸ್ಯ ಗಿಡಮರಗಳಿಂದ ಕೂಡಿದ ಬೆಟ್ಟ

ಸಗ್ಗ ಸುಖ - ಸ್ವರ್ಗದ ಸುಖ; ತುಂಬ ಸಂತೋಷ

ಜಗದ ಲೀಲೆ - ಜಗತ್ತಿನ ಆಟ, ಪ್ರಕೃತಿಯ ಆಟ

ನೋಡು ತಾಣವು - ನೋಡುವ ಸ್ಥಳಗಳು

### ಅಭ್ಯಾಸ

**೧. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

ಅ) ಹಕ್ಕಿ ಎಲ್ಲಿಗೆ ಹಾರಿತು ?

ಆ) ಹಕ್ಕಿ ಮೇಲಕ್ಕೆ ಏರಿದ ಬಗೆ ತಿಳಿಸಿರಿ.

ಇ) ಹಕ್ಕಿ ಗೂಡಿನಾಚೆಗೆ ಇರುವ ನೋಟ ಕಂಡು ಏನೆಂದು ಉದ್ಗಾರವೆತ್ತಿತು?

ಈ) ಹಕ್ಕಿ ನಿತ್ಯ ಎಲ್ಲಿಗೆ ಹಾರಬೇಕೆಂದು ಯೋಚಿಸಿತು ?

ಉ) ಅಮ್ಮನಿಗೆ ಮರಿಹಕ್ಕಿ ಏನು ಹೇಳಿತು?

ಊ) ತಾಯಿ ಹಕ್ಕಿ ಕಂದನಿಗೆ ಹೇಳಿದುದೇನು?

**೨. ಕೆಳಗಿನ ಪ್ರಶ್ನೆಗಳಿಗೆ ೨-೩ ವಾಕ್ಯದಲ್ಲಿ ಉತ್ತರಿಸಿರಿ.**

ಅ) ಮರಿ ಹಕ್ಕಿ ಬಾನಿಗೆ ಹಾರಿದ ರೀತಿಯನ್ನು ವಿವರಿಸಿ.

ಆ) ಆಕಾಶಕ್ಕೆ ಹಾರಿದ ಹಕ್ಕಿ ಏನೆಂದುಕೊಂಡಿತು ?

**೩. ಹೊಂದಿಸಿ ಬರೆಯಿರಿ.**

| ಅ | ಆ | |
|---|---|---|
| ಅ) ಗೂಡಿನಿಂದ | ೧) ಹಸಿರುಬೆಟ್ಟ | ............................ |
| ಆ) ಹಳ್ಳಕೊಳ್ಳ | ೨) ಬಾನಿನೆಡೆಗೆ | ............................ |
| ಇ) ಅಂದ | ೩) ಮರಿ ಹಕ್ಕಿ | ............................ |
| ಈ) ಆಡಿ ಆಡಿ ಹಕ್ಕಿ | ೪) ಚಂದ | ............................ |
| ಉ) ಹಿಗ್ಗಿ ಹೇಳಿತು | ೫) ಗೂಡು ಸೇರಿತು | ............................ |



**೪. ಕೆಳಗಿನ ಪದಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಬಳಸಿ.**

ಅ) ಗೂಡು : ............................................................

ಆ) ಬಾನು : ............................................................

ಇ) ಹಳ್ಳಕೊಳ್ಳ : ............................................................

ಈ) ತಾಣ : ............................................................

ಉ) ಬೆಟ್ಟ : ............................................................

೫. ಕೆಳಗೆ ಕೊಟ್ಟ ನಾಲ್ಕು ಉತ್ತರಗಳಲ್ಲಿ ಸರಿಯಾದ ಪದವನ್ನು ಆರಿಸಿ ಬಿಟ್ಟ ಸ್ಥಳ ತುಂಬಿರಿ.

೧) ಗೂಡಿನಿಂದ ಹಕ್ಕಿ ಹಾರಿತು ................................

ಅ) ಗೂಡಿನೆಡೆಗೆ ಆ) ಬಾನಿನೆಡೆಗೆ ಇ) ಭೂಮಿಕಡೆಗೆ ಈ) ಮನೆಯಕಡೆಗೆ

೨) ................................ ಹಸಿರು ಬೆಟ್ಟ ಕಂಡು ಹಾಡಿತು.

ಅ) ಹಳ್ಳಕೊಳ್ಳ ಆ) ಸಮುದ್ರಸಾಗರ ಇ) ಗುಡ್ಡಬೆಟ್ಟ ಈ) ಮನೆಮಠ

೩) ಗೂಡು ತೊರೆದು ಹಾರಬೇಕು ನಿತ್ಯ ................................

ಅ) ಬಾನಿಗೆ ಆ) ಮನೆಗೆ ಇ) ಕೊಳ್ಳಕೆ ಈ) ಆನಂದಕೆ

೪) ಹಕ್ಕಿ ಸಗ್ಗ ಸುಖವು ಕಂಡ ಹಾಗೆ ................................

ಅ) ನಕ್ಕು ಹಾಡಿತು ಆ) ಹಿಗ್ಗಿ ಹಾಡಿತು

ಇ) ಅತ್ತು ಹಾಡಿತು ಈ) ದೀನವಾಗಿ ಹಾಡಿತು.

೫) ಅಮ್ಮ ಮರಳಿ ಮನೆಗೆ ಬರಲು ................................ ಹೇಳಿತು.

ಅ) ಎದ್ದು ಆ) ಬಗ್ಗಿ ಇ) ಕುಗ್ಗಿ ಈ) ಹಿಗ್ಗಿ

೬) ತೀರಲಿಲ್ಲ ಕಂದ ನೀನು ನೋಡುವ ................................ವು

ಅ) ಜಾಗ ಆ) ಸ್ಥಳ ಇ) ತಾಣ ಈ) ಮನೆ

೬. ಈ ಪದ್ಯದಲ್ಲಿರುವ ಪ್ರಾಸ ಪದಗಳನ್ನು ಹುಡುಕಿ ಬರೆಯಿರಿ.

ಮೇಲ ಮೇಲಕೇರಿ ಹಕ್ಕಿ
ಕೆಳಗೆ ನೋಡಿತು !
ಹಳ್ಳಕೊಳ್ಳ ಹಸಿರು ಬೆಟ್ಟ
ಕಂಡು ಹಾಡಿತು !!

೭. ಕೆಳಗಿನ ಪದಗಳನ್ನು ಗಮನಿಸಿ ಓದಿ.

ಬಡಿ – ಬಡಿದು, ಮೇಲ – ಮೇಲಕೆ, ಹಳ್ಳ – ಕೊಳ್ಳ,
ಆಡಿ – ಹಾಡಿ, ಅಂದ – ಚೆಂದ.

ನೀವು ಉಪಯೋಗಿಸುವ ಇಂತಹ ನಾಲ್ಕು ಪದಗಳ ಪಟ್ಟಿ ಮಾಡಿರಿ.

ಅ) ........................ ಆ) ........................

ಇ) ........................ ಈ) ........................

**೮. ಈ ಪದಗಳನ್ನು ಬಿಡಿಸಿ ಬರೆದಿದೆ ಗಮನಿಸಿ ಓದಿ.**

ಅ) ಬಾನಿನೆಡೆಗೆ = ಬಾನಿನ + ಎಡೆಗೆ

ಆ) ಮೇಲಕೇರಿ = ಮೇಲಕೆ + ಏರಿ

ಇ) ಗೂಡಿನಾಚೆ = ಗೂಡಿನ + ಆಚೆ

ಈ) ತಿಳಿವುದಾಗ = ತಿಳಿವುದು + ಆಗ

**೯. ಈ ಕೆಳಗಿನ ಪದ್ಯ ಓದಿರಿ ಇದರ ಸಾರಾಂಶ ಹೇಳಿ.**

## ಹಕ್ಕಿ ಮತ್ತು ಚುಕ್ಕಿ

ಮರದೊಳಗಿನ
ಹಕ್ಕಿಗಳು
ನನ್ನ ಗೆಳೆಯರು
ಮುಗಿಲ ಮೇಲಿನ
ಚುಕ್ಕಿಗಳು
ನನ್ನ ಗೆಳೆಯರು

ನಿತ್ಯ ಹಗಲು
ಹಕ್ಕಿಗಳೊಡನೆ
ಮಾತನಾಡುವೆ
ಮುದದಿ ನಾನು
ಸಮಯ ಕಳೆಯುವೆ

–ಜಯವಂತ ಕಾಡದೇವರು





## ಗದ್ಯ ಪಾಠ – ೫

# ಹಸ್ತ ರೇಖೆ ಬದಲಿಸಿದ ಬಾಲಕ



ತಕ್ಷಶಿಲೆ ಪ್ರಾಚೀನ ಭಾರತದ ಅತಿದೊಡ್ಡ ಗುರುಕುಲ. ಅಲ್ಲಿ ಓದುವುದೆಂದರೆ ಘನತೆಯ ವಿಷಯ. ತಮ್ಮ ಮಕ್ಕಳು ಅಲ್ಲಿ ಓದಿ ವಿದ್ಯಾವಂತರಾಗಲಿ ಎಂದು ತಂದೆ–ತಾಯಿಗಳು ಆಸೆ ಪಡುತ್ತಿದ್ದರು. ಒಬ್ಬ ತಾಯಿ ತನ್ನ ಮಗನನ್ನು ಗುರುಕುಲಕ್ಕೆ ಸೇರಿಸಲು ಬಂದಳು. ವಿದ್ಯೆ ಕಲಿಸುವಂತೆ ಗುರುಗಳಲ್ಲಿ ಬೇಡಿಕೊಂಡಳು.

ಬಾಲಕನಿಗೆ ಗುರುಕುಲದ ವಾತಾವರಣ ಹೊಸದು. ಎತ್ತಲೋ ನೋಡುತ್ತ ನಿಂತಿದ್ದ. ಗುರುಗಳು ಅದನ್ನು ಗಮನಿಸಿದರು. ಕರೆದು ಬಾಲಕನ ಕೈ ನೋಡಿದರು. ನಿರಾಶರಾದರು. ಈ ಬಾಲಕನಿಗೆ ಓದಿನಲ್ಲಿ ಅಭಿರುಚಿಯಿಲ್ಲ. ವಿದ್ಯೆ ಹತ್ತದು ಎಂದು ತಿಳಿಸಿದರು. ತಾಯಿ ದಕ್ಷಿ ಗಾಬರಿಯಾದಳು. ವಿದ್ಯಾದಾನ ಮಾಡುವಂತೆ ಗುರುಗಳಲ್ಲಿ ಪರಿಪರಿಯಾಗಿ ಬೇಡಿಕೊಂಡಳು. ಆದರೆ ಗುರುಗಳು "ಅವನ ಕೈಯಲ್ಲಿ ವಿದ್ಯಾರೇಖೆಯಿಲ್ಲ. ವಿದ್ಯೆ ಹತ್ತುವುದಿಲ್ಲ" ಎಂದು ಕಡ್ಡಿ ಮುರಿದಂತೆ ಹೇಳಿದರು. ತಾಯಿಗೆ ತುಂಬಾ ನಿರಾಸೆ ಆಯಿತು. ಅವಳಿಗೆ ಅಳು ಬಂದಿತು. ತಾಯಿಯ ನೋವನ್ನು ಆ ಬಾಲಕ ಗಮನಿಸಿದ. ತಾಯಿಯ ಆಸೆಯನ್ನು ಪೂರೈಸಲು ಯೋಚಿಸತೊಡಗಿದ.





ಸ್ವಲ್ಪ ಸಮಯದ ನಂತರ ಬಾಲಕ ಮತ್ತೆ ಅಲ್ಲಿಗೆ ಬಂದನು. "ಏಕೆ ಬಂದೆ?" ಎಂದು ಗುರುಗಳು ಗಡುಸಾಗಿ ಕೇಳಿದರು. "ಗುರುಗಳೆ, ವಿದ್ಯಾರೇಖೆ ಹೇಗಿರುತ್ತದೆ?" ಎಂದು ಬಾಲಕ ವಿನೀತನಾಗಿ ಕೇಳಿದನು. ಗುರುಗಳು ಬಳಿಯಿದ್ದ ಒಬ್ಬ ಬಾಲಕನನ್ನು ಕರೆದರು. ಅವನ ಕೈ ಹಿಡಿದು "ಇಗೋ ನೋಡು, ಇದು ವಿದ್ಯಾ ರೇಖೆ ! ಅದು ನಿನಗೆ ಇಲ್ಲ ಹೋಗು" ಎಂದರು.

ಬಾಲಕ ನಿರಾಶನಾಗಿ ಹೊರಬಂದ. ಹಲವು ಬಾರಿ ಕೈ ನೋಡಿದ, ಯೋಚಿಸಿದ. ತಕ್ಷಣ ಬೆಣಚುಕಲ್ಲಿನಿಂದ ಗಟ್ಟಿಯಾಗಿ ವಿದ್ಯಾರೇಖೆಯನ್ನು ಕೈ ಮೇಲೆ ಕೊರೆದುಕೊಂಡನು. ಚರ್ಮ ಕಿತ್ತಿತು. ರಕ್ತ ಸುರಿಯಲು ಆರಂಭಿಸಿತು. ವಿದ್ಯಾರೇಖೆಯನ್ನು ನೋಡಿ ನೋವಿನಲ್ಲೂ ಸಂತಸಪಟ್ಟನು. ದಡ ದಡನೆ ಗುರುಕುಲದ ಒಳಗೆ ಹೊಕ್ಕ. "ಗುರುಗಳೇ ನನ್ನ ಕೈಯಲ್ಲಿ ವಿದ್ಯಾರೇಖೆ ಮೂಡಿದೆ, ನೋಡಿ!" ಎಂದ. ತನ್ನ ಕೈಯನ್ನು ಮುಂದೆ ಚಾಚಿದ.

ರಕ್ತ ಸುರಿಯುತ್ತಿರುವ ಆ ಪುಟ್ಟ ಕೈಯನ್ನು ಗುರುಗಳು ನೋಡಿದರು. ಗಾಬರಿಯಾದರು. ಮನಸ್ಸು ಕಲಕಿತು. ಬಾಲಕನ ತಲೆ ನೇವರಿಸಿ ಅಪ್ಪಿಕೊಂಡರು. ಅವನಲ್ಲಿ ವಿದ್ಯೆ ಕಲಿಯುವ ಛಲವನ್ನು ಗುರುತಿಸಿದರು. "ನಿನ್ನಂತಹ ಶಿಷ್ಯನಿಗೆ ಅಲ್ಲದೆ, ಇನ್ನಾರಿಗೆ ವಿದ್ಯಾದಾನ ಮಾಡಲಿ"? ಎಂದು ಕಣ್ಣೀರು ಸುರಿಸಿದರು. ಶಿಷ್ಯನನ್ನಾಗಿ ಸ್ವೀಕರಿಸಿದರು. ಈ ಬಾಲಕನೆ **ಪಾಣಿನಿ**.

ಪಾಣಿನಿ ಸತತ ಅಭ್ಯಾಸ ಮಾಡಿದ, ಮನನ ಮಾಡಿದ, ಮನನ ಮಾಡಿದ್ದನ್ನು ಚಿಂತನ ಮಾಡಿದ. ತನ್ನ ಪ್ರತಿಭೆಯಿಂದ ಹೊಸ ವಿಚಾರಗಳನ್ನು ಹೊರಹೊಮ್ಮಿಸಿದ. ಸಂಸ್ಕೃತ ಭಾಷೆಗೆ ವ್ಯಾಕರಣ ಶಾಸ್ತ್ರ ರಚಿಸಿದನು. ಅದು ಜಗತ್ ಪ್ರಸಿದ್ಧವಾಯಿತು. ಇಂದಿಗೂ ಪಾಣಿನಿ ರಚಿಸಿದ ವ್ಯಾಕರಣ ಶಾಸ್ತ್ರ ಸಂಸ್ಕೃತಕ್ಕೆ ಮೂಲ ಮಂತ್ರವಾಗಿದೆ. ಇವನ ಕಾಲ ಕ್ರಿ.ಪೂ. ೬ನೇ ಶತಮಾನ. ಇವನ ಗುರುವಿನ ಹೆಸರು ಉಪವರ್ಷ ಎಂಬುದಾಗಿದೆ.

## ಓದಿ – ತಿಳಿ :

ಪ್ರಾಚೀನ – ಹಿಂದಿನ, ಘನತೆ – ಹಿರಿಮೆ, ಅಭಿರುಚಿ – ಆಸಕ್ತಿ, ಒಲವು,
ವಿದ್ಯಾದಾನ – ಶಿಕ್ಷಣ ನೀಡು, ಪರಿಪರಿ – ವಿವಿಧ ರೀತಿ, ಪೂರೈಸು – ಪೂರ್ಣಮಾಡು,
ಬೇಡು – ವಿನಂತಿಸು, ಗಡುಸು – ಬಿರುಸು, ಕಲಕು – ಕದಡು, ಛಲ – ಹಟ

## ಗಮನಿಸಿ ತಿಳಿ :

ಗುರುಕುಲ – ಶಿಕ್ಷಣ ಕೇಂದ್ರ, ಪ್ರಾಚೀನ ಕಾಲದ ಶಾಲೆ.
ಕಡ್ಡಿ ಮುರಿದಂತೆ ಮಾತನಾಡು – ನಿಷ್ಠುರವಾಗಿ ಮಾತನಾಡು
ವಿದ್ಯಾರೇಖೆ – ಹಸ್ತ ಸಾಮುದ್ರಿಕೆ ಶಾಸ್ತ್ರದ ಪ್ರಕಾರ ಅಂಗೈಯಲ್ಲಿ ವಿದ್ಯೆಯನ್ನು ಸೂಚಿಸುವ ಗೆರೆ
ಮನಸ್ಸು ಕಲಕು – ಮನಸ್ಸಿನಲ್ಲಿ ಉಂಟಾದ ಭಾವಗಳನ್ನು ಕದಡುವುದು.
ತಲೆ ನೇವರಿಸು – ಪ್ರೀತಿಯಿಂದ ತಲೆಯ ಮೇಲೆ ಕೈಯಾಡಿಸು, ಸಾಂತ್ವನ ನೀಡು



## ಅಭ್ಯಾಸ

### ೧. ಒಂದು ವಾಕ್ಯದಲ್ಲಿ ಉತ್ತರಿಸಿರಿ.

ಅ) ಪ್ರಾಚೀನ ಭಾರತದ ಅತಿದೊಡ್ಡ ಗುರುಕುಲ ಯಾವುದಾಗಿತ್ತು?

ಆ) ಆಗಿನ ಕಾಲದ ತಂದೆ-ತಾಯಿಗಳ ಆಸೆ ಏನಾಗಿತ್ತು?

ಇ) ತಾಯಿ ಗುರುಗಳಲ್ಲಿ ಏನೆಂದು ಬೇಡಿಕೊಂಡಳು?

ಈ) ಗುರುಗಳು ಬಾಲಕನ ಕೈ ನೋಡಿ ಏನೆಂದು ಹೇಳಿದರು?

ಉ) ಬಾಲಕ ಕೈಯಲ್ಲಿ ವಿದ್ಯಾರೇಖೆಯನ್ನು ಯಾವುದರಿಂದ ಮೂಡಿಸಿಕೊಂಡನು?

ಊ) ಪಾಣಿನಿಯ ಗುರುವಿನ ಹೆಸರೇನು?

ಋ) ಪಾಣಿನಿ ಯಾವ ಭಾಷೆಯಲ್ಲಿ ವ್ಯಾಕರಣ ರಚಿಸಿದ?

೨. ಈ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ.

ಅ) ಗುರುಗಳು ಬಾಲಕನಿಗೆ ವಿದ್ಯೆ ಕಲಿಸಲು ಏಕೆ ನಿರಾಕರಿಸಿದರು?

ಆ) ಬಾಲಕ ತನ್ನ ಕೈಯಲ್ಲಿ ವಿದ್ಯಾರೇಖೆಯನ್ನು ಮೂಡಿಸಿಕೊಂಡ ಬಗೆಯನ್ನು ತಿಳಿಸಿರಿ.

೩. ಈ ಮಾತನ್ನು ಯಾರು ಯಾರಿಗೆ ಹೇಳಿದರು.

ಅ) "ಇಗೋ ನೋಡು ಇದು ವಿದ್ಯಾರೇಖೆ"

ಆ) "ಏಕೆ ಬಂದೆ"?

ಇ) "ಗುರುಗಳೇ ನನ್ನ ಕೈಯಲ್ಲಿ ವಿದ್ಯಾರೇಖೆ ಮೂಡಿದೆ ನೋಡಿ!"

೪. ಬಿಟ್ಟ ಸ್ಥಳ ತುಂಬಿರಿ.

ಅ) ತಾಯಿ ವಿದ್ಯಾದಾನ ಮಾಡುವಂತೆ ಗುರುಗಳಲ್ಲಿ ........................ ಬೇಡಿಕೊಂಡಳು.

ಆ) ಬಾಲಕ ತಾಯಿಯ ........................ ಪೂರೈಸಲು ಯೋಚಿಸತೊಡಗಿದ.

ಇ) ಬಾಲಕ ಆ ರಕ್ತಮಯವಾದ ........................ ನ್ನು ನೋಡಿ ನೋವಿನಲ್ಲೂ ಸಂತಸಪಟ್ಟ..

ಈ) ಬೆಣಚು ಕಲ್ಲಿನಿಂದ ಗಟ್ಟಿಯಾಗಿ ........................ ಕೈ ಮೇಲೆ ಕೊರೆದು ಕೊಂಡನು.

ಉ) ನಿನ್ನಂತಹ ........................ ಅಲ್ಲದೆ ಇನ್ನಾರಿಗೆ ವಿದ್ಯಾದಾನ ಮಾಡಲಿ ? ಎಂದರು.



೫. ಈ ಪದಗಳನ್ನು ಸ್ವಂತ ವಾಕ್ಯದಲ್ಲಿ ಉಪಯೋಗಿಸಿ ಬರೆಯಿರಿ.

ಪ್ರಾಚೀನ : ................................................

ಅಭಿರುಚಿ : ................................................

ಪೂರೈಸು : ................................................

ವಿನೀತ : ................................................

ಪರಿಪರಿಯಾಗಿ : ................................................

೬. ಈ ಪ್ರಶ್ನೆಗಳನ್ನು ವಿಚಾರ ಮಾಡಿ ಉತ್ತರಿಸಿರಿ.

ಅ) ಗುರುಕುಲ ಎಂದರೇನು?

.................................................................................................

ಆ) ಬಾಲಕ ತಾಯಿಯ ನೋವನ್ನು ನೀಗಿಸಲು ಮಾಡಿದ ಉಪಾಯ ವಿವರಿಸಿ.

.................................................................................................

ಇ) ಗುರುಗಳು ಆ ಬಾಲಕನಿಗೆ ವಿದ್ಯೆ ನೀಡಲು ಏಕೆ ಮನಸ್ಸು ಮಾಡಿದರು?

.................................................................................................

೭. ಗೆರೆ ಎಳೆದ ಪದ ಬರೆದು ಅರ್ಥ ತಿಳಿಸಿ.

ಅ) ತಕ್ಷಶಿಲೆ ಪ್ರಾಚೀನ ಭಾರತದ ಅತಿದೊಡ್ಡ **ಗುರುಕುಲ.**

ಆ) ತಾಯಿಯ ಆಸೆಯನ್ನು **ಪೂರೈಸಲು** ಯೋಚಿಸತೊಡಗಿದ.

ಇ) 'ಏಕೆ ಬಂದೆ?' ಎಂದು ಗುರುಗಳು **ಗಡುಸಾಗಿ** ಕೇಳಿದರು.

ಅ) ........................ ........................

ಆ) ........................ ........................

ಇ) ........................ ........................



೮. ಈ ಪದಗಳನ್ನು ಓದುತ್ತಾ ಬರೆಯಿರಿ.

| ಪ್ರಾಚೀನ | ವಿದ್ಯೆ | ವಿದ್ಯಾರೇಖೆ | ವ್ಯಾಕರಣ | ಚರ್ಮ |
|---|---|---|---|---|
| ...................... | ...................... | ...................... | ...................... | ...................... |
| ...................... | ...................... | ...................... | ...................... | ...................... |
| ...................... | ...................... | ...................... | ...................... | ...................... |
| ...................... | ...................... | ...................... | ...................... | ...................... |

| ಬೆಣಚುಕಲ್ಲು | ಶಿಷ್ಯ | ಅಪ್ಪಿಕೊ | ಸಂಸ್ಕೃತ | ಕಣ್ಣೀರು |
|---|---|---|---|---|
| .................... | .................... | .................... | .................... | .................... |
| .................... | .................... | .................... | .................... | .................... |
| .................... | .................... | .................... | .................... | .................... |
| .................... | .................... | .................... | .................... | .................... |

**೯. ಈ ನುಡಿಗಟ್ಟುಗಳ ಅರ್ಥ ತಿಳಿಯಿರಿ. ನಿಮ್ಮ ವಾಕ್ಯದಲ್ಲಿ ಉಪಯೋಗಿಸಿರಿ.**

೧. ವಿದ್ಯೆ ಹತ್ತು = ವಿದ್ಯೆಯನ್ನು ತಿಳಿದುಕೊ ಅಥವಾ ಅರ್ಥ ಮಾಡಿಕೊ.

ವಾಕ್ಯದಲ್ಲಿ ಪ್ರಯೋಗ= ಆಸಕ್ತಿಯಿಲ್ಲದೆ ಅಭ್ಯಾಸ ಮಾಡಿದರೆ ವಿದ್ಯೆ ಹತ್ತುವುದಿಲ್ಲ.

ವಾಕ್ಯ ರಚಿಸು: ..........................................................................

೨. ಕಡ್ಡಿ ಮುರಿದಂತೆ= ನಿಷ್ಠುರವಾಗಿ

ವಾಕ್ಯದಲ್ಲಿ ಪ್ರಯೋಗ = ಕಡ್ಡಿಮುರಿದಂತೆಮಾತನಾಡಬಾರದು.

ವಾಕ್ಯ ರಚಿಸು: ..........................................................................

೩. ಮನಸ್ಸು ಕಲಕು = ಭಾವನೆಗಳನ್ನು ಕದಡು.

ವಾಕ್ಯ ಪ್ರಯೋಗ : ಭಿಕ್ಷುಕನ ದೀನ ಪರಿಸ್ಥಿತಿಯನ್ನು ಕಂಡು ಮನಸ್ಸು ಕಲಕಿತು.

ವಾಕ್ಯ ರಚಿಸು: ..........................................................................................



**೧೦. ಗಮನಿಸಿ ಓದು :**

| | | | | |
|---|---|---|---|---|
| ಮಗು | + | ಅನ್ನು | = | ಮಗುವನ್ನು |
| ನೋವು | + | ಅನ್ನು | = | ನೋವನ್ನು |
| ಕೈ | + | ಅಲ್ಲಿ | = | ಕೈಯಲ್ಲಿ |
| ಗುರುಗಳು | + | ಅಲ್ಲಿ | = | ಗುರುಗಳಲ್ಲಿ |
| ಅಭಿರುಚಿ | + | ಇಲ್ಲ | = | ಅಭಿರುಚಿಯಿಲ್ಲ |

## ೧೧. ಕೆಳಗಿನ ಗುರು–ಶಿಷ್ಯರ ಪರಂಪರೆ ಓದಿರಿ.

| | ಶಿಷ್ಯ | ಗುರು |
|---|---|---|
| ಅ. | ರಾಮ | ವಶಿಷ್ಠ |
| ಆ. | ಕೃಷ್ಣ | ಸಾಂದೀಪನಿ |
| ಇ. | ಏಕಲವ್ಯ | ದ್ರೋಣಾಚಾರ್ಯ |
| ಈ. | ಕರ್ಣ | ಪರಶುರಾಮ |
| ಉ. | ದುರ್ಯೋಧನ | ಬಲರಾಮ |
| ಊ. | ಹಕ್ಕಬುಕ್ಕ | ವಿದ್ಯಾರಣ್ಯ |
| ಋ. | ಶಿವಾಜಿ | ದಾದಾಜಿ ಕೊಂಡದೇವ |
| ಎ. | ವಿವೇಕಾನಂದ | ರಾಮಕೃಷ್ಣ ಪರಮಹಂಸ |



## ೧೨. ಲೇಖನ ಚಿಹ್ನೆಗಳು

**ಗಮನಿಸಿ ಓದಿರಿ.**

ಸ್ವಲ್ಪ ಸಮಯದ ನಂತರ ಬಾಲಕ ಮತ್ತೆ ಅಲ್ಲಿಗೆ ಬಂದನು. "ಏಕೆ ಬಂದೆ? ಎಂದು ಗಡುಸಾಗಿ ಕೇಳಿದರು. "ಗುರುಗಳೆ, ವಿದ್ಯಾರೇಖೆ ಹೇಗಿರುತ್ತದೆ?" ಎಂದು ಬಾಲಕ ವಿನೀತನಾಗಿ ಕೇಳಿದನು. "ನೋಡಿ, ಗುರುಗಳೇ ನನ್ನ ಕೈಯಲ್ಲಿ ವಿದ್ಯಾರೇಖೆ ಮೂಡಿದೆ!" ಎಂದು ಸಂತಸದಿಂದ ಕೈ ಮುಂದೆ ಚಾಚಿದ.

**೧. ಪೂರ್ಣ ವಿರಾಮ .   ೨. ಅರ್ಧವಿರಾಮ ;   ೩. ಅಲ್ಪ ವಿರಾಮ ,**

**೪. ಪ್ರಶ್ನಾರ್ಥಕ ಚಿಹ್ನೆ ?   ೫. ಉದ್ಗಾರ ವಾಚಕ ಚಿಹ್ನೆ " "   ೬. ಆಶ್ಚರ್ಯ ಚಿಹ್ನೆ !**

## ೧೩. ಈ ಕಥೆ ಓದಿ ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆ.

ಏಕಲವ್ಯ ಎಂಬ ಬಾಲಕನಿದ್ದ. ಅವನಿಗೆ ದ್ರೋಣಾಚಾರ್ಯರಲ್ಲಿ ಬಿಲ್ಲು ವಿದ್ಯೆಯನ್ನು ಕಲಿಯುವ ಆಸೆ. ಒಂದು ದಿನ ನೇರವಾಗಿ ಹಸ್ತಿನಾವತಿಗೆ ಹೋದನು. ದ್ರೋಣಾಚಾರ್ಯರ ದರುಶನಕ್ಕಾಗಿ ಕಾದು ನಿಂತನು. ಗುರು ದ್ರೋಣರು ದೂರದಲ್ಲಿ ನಡೆದು ಬರುತ್ತಿದ್ದರು. ಓಡಿ ಹೋಗಿ ಅವರ ಪಾದಕ್ಕೆ ವಂದಿಸಿದನು. ತಾನು ಬೇಡರ ಬಾಲಕ, ಕಾಡಿನಲ್ಲಿ ವಾಸಿಸುತ್ತಿರುವೆ ಎಂದು ಪರಿಚಯ ಮಾಡಿಕೊಂಡನು. ವಿದ್ಯೆ ಕಲಿಸುವಂತೆ ವಿನಯದಿಂದ ಬೇಡಿಕೊಂಡನು.

ದ್ರೋಣರು ತಾವು ರಾಜಗುರುಗಳು, ಆದುದರಿಂದ ಇತರರಿಗೆ ವಿದ್ಯೆ ಕಲಿಸಲು ಆಗುವುದಿಲ್ಲ ಎಂದು ನಿರಾಕರಿಸಿದರು. ಏಕಲವ್ಯನಿಗೆ ಬಹಳ ದುಃಖವಾಯಿತು. ಗುರುಗಳ ಮಿತಿ ಅರ್ಥವಾಯಿತು. ವಿದ್ಯೆ ಕೊಡದಿದ್ದರೂ ಚಿಂತೆಯಿಲ್ಲ, ಬಿಲ್ವಿದ್ಯೆಗೆ ಆಶೀರ್ವಾದ ಬೇಡಿದ. ಗುರುಗಳು ಶುಭವಾಗಲಿ ಎಂದು ಹರಸಿದರು. ಏಕಲವ್ಯ ಕಾಡಿಗೆ ಬಂದನು. ಅವನಿಗೆ ಅನ್ನ ನೀರು ಸೇರಲಿಲ್ಲ. ನಿದ್ದೆ ಹತ್ತಲಿಲ್ಲ. ಹೇಗಾದರೂ ವಿದ್ಯೆ ಕಲಿಯಲೇಬೇಕೆಂದು ಚಡಪಡಿಸಿದನು. ಹಟ ಮನೆ ಮಾಡಿತು. ಮಣ್ಣಿನಿಂದ ದ್ರೋಣಾಚಾರ್ಯರ ಮೂರ್ತಿಯನ್ನು ಮಾಡಿದ. ಅದನ್ನೇ ಗುರು ಎಂದು ಪೂಜಿಸಿದನು. ಗುರುವಿನ ಎದುರಿನಲ್ಲಿ ಸತತ ಪರಿಶ್ರಮದಿಂದ ಅಭ್ಯಾಸ ಮಾಡಿದನು. ಬಿಲ್ಲು ವಿದ್ಯೆಯಲ್ಲಿ ಪರಿಣಿತನಾದನು. ಅರ್ಜುನನ್ನು ಮೀರಿಸುವಂತಹ ಜಾಣತನ ಪಡೆದನು.

**ಪ್ರಶ್ನೆಗಳು :**

೧. ಏಕಲವ್ಯ ಯಾರು?

.......................................................................................................

೨. ಏಕಲವ್ಯನಿಗೆ ಯಾರ ಬಳಿ ವಿದ್ಯೆ ಕಲಿಯುವ ಆಸೆ ಆಯಿತು?

.......................................................................................................

೩. ದ್ರೋಣರು ಏಕಲವ್ಯನಿಗೆ ಶಿಕ್ಷಣ ನೀಡಲು ಏಕೆ ನಿರಾಕರಿಸಿದರು?

.......................................................................................................

೪. ಏಕಲವ್ಯ ಏಕೆ ಚಡಪಡಿಸಿದನು?

.......................................................................................................

೫. ಏಕಲವ್ಯ ಬಿಲ್ಲು ವಿದ್ಯೆಯಲ್ಲಿ ಪರಿಣಿತನಾದ ಬಗೆ ತಿಳಿಸಿರಿ.

.......................................................................................................





# ಗದ್ಯ ಪಾಠ – ೬

## ಹಬ್ಬಗಳು



ಗೋಪಿ, ಗಂಗಾ, ಜಾಫರ್ ಮತ್ತು ಜಾನ್ ನಾಲ್ಕು ಜನ ಗೆಳೆಯರು. ಅವರದು ಒಂದೇ ವಠಾರದಲ್ಲಿ ವಾಸ. ಒಂದೇ ಶಾಲೆಯಲ್ಲಿ ಕಲಿಕೆ. ಅವರಿಗೆ ವಠಾರದ ದಾಸಪ್ಪ ತಾತನಿಂದ ಕಥೆ ಕೇಳುವುದೆಂದರೆ ಎಲ್ಲಿಲ್ಲದ ಪ್ರೀತಿ.

ಅಂದು ಊರಿನ ಮನೆ ಮನೆಗಳಲ್ಲಿ ದೀಪಗಳ ಹಬ್ಬ. ಪಟಾಕಿ ಸಿಡಿತ, ಹೂಬಾಣದ ಚಿಕ್ಕೆಗಳು, ಸಂತೋಷವೇ ಬೀದಿಗೆ ಬಂದಿತ್ತು. ಅಂದು ಗೋಪಿ ತನ್ನ ಮನೆಯಲ್ಲಿ ತಾತ ಹಾಗೂ ತನ್ನ ಗೆಳೆಯರನ್ನು ಸ್ವಾಗತಿಸಿ ಉಪಚರಿಸಿದನು. ಎಲ್ಲರೂ ಊಟ ಮುಗಿಸಿ ವರಾಂಡದಲ್ಲಿ ಹೋಗಿ ಕುಳಿತರು.

ಜಾನ್, ಜಾಫರ್, ಗಂಗಾ ಎಲ್ಲರೂ ತಾತನನ್ನು ಕಥೆ ಹೇಳುವಂತೆ ದುಂಬಾಲು ಬಿದ್ದರು.

**ತಾತ** : ಇಂದು ಕಥೆ ಬೇಡ, ಹಬ್ಬಗಳ ಆಚರಣೆಯ ಹಿನ್ನೆಲೆ ತಿಳಿಯೋಣ (ಎಲ್ಲರೂ ಹೋ ಎಂದು ಕೂಗಿದರು) ಗೋಪಿ ನಿಮ್ಮ ಮನೆಯಲ್ಲಿ ಬಹಳ ಸಡಗರವಿದೆ. ಕಾರಣ ಹೇಳುವೆಯಾ?

**ಗೋಪಿ** : ಓ ! ಆಗಲಿ ತಾತ, ಇಂದು ದೀಪಾವಳಿ ಹಬ್ಬ, ಮನೆ ಸಿಂಗಾರ ಮಾಡುತ್ತಾರೆ. ತಳಿರು ತೋರಣ ಕಟ್ಟುತ್ತಾರೆ. ಮನೆಯಲ್ಲಿ ಬಗೆ ಬಗೆಯ ಆಕಾರದ ದೀಪಗಳನ್ನೆಲ್ಲಾ ಹಚ್ಚುತ್ತಾರೆ. ಹೊಸ ಬಟ್ಟೆ ತೊಡುತ್ತಾರೆ. ಲಕ್ಷ್ಮೀ

ಪೂಜೆ ಮಾಡಿ ಪಟಾಕಿಗಳನ್ನು ಸಿಡಿಸುತ್ತಾರೆ. ಗೋವಿನ ಪೂಜೆಯನ್ನು ಮಾಡಿ ಸಂತೋಷಪಡುತ್ತಾರೆ. ಈ ಹಬ್ಬಕ್ಕೆ ಬಂಧು ಬಳಗದವರನ್ನು ಕರೆಯುತ್ತಾರೆ.

**ತಾತ** : ದೀಪ ಏಕೆ ಹಚ್ಚುತ್ತಾರೆ? ವಿಚಾರ ಮಾಡಿ ಯಾರಾದರೂ ಹೇಳುವಿರಾ?

**ಜಾನ್** : ದೀಪ ಅಂದರೆ ಬೆಳಕು, ಅದು ಜ್ಞಾನದ ಸಂಕೇತ.

**ತಾತ** : ಬಹಳ ಚೆನ್ನಾಗಿ ತಿಳಿದುಕೊಂಡಿರುವೆ. ಜಾಫರ್ ನಿಮ್ಮ ಮನೆಯಲ್ಲಿ ಯಾವ ಹಬ್ಬ ಅಚರಿಸುತ್ತೀರಾ?

**ಜಾಫರ್** : ನಮ್ಮ ಮನೆಯಲ್ಲಿ ರಮ್ಜಾನ್ ಅದ್ದೂರಿಯಾಗಿ ಆಚರಿಸುತ್ತಾರೆ.

**ಗಂಗಾ** : ರಮ್ಜಾನ್ ಹೇಗೆ ಆಚರಿಸುತ್ತಾರೆ?

**ಜಾಫರ್** : ರಮ್ಜಾನ್ ತಿಂಗಳು ಪವಿತ್ರ ತಿಂಗಳು. ಹಗಲು ಉಪವಾಸ ಮಾಡಿ ದೇವರಿಗೆ ಪ್ರಾರ್ಥನೆ ಸಲ್ಲಿಸುತ್ತಾರೆ. ಸೂರ್ಯಾಸ್ತದ ನಂತರ ಊಟ ಮಾಡುತ್ತಾರೆ, ತಿಂಗಳ ನಂತರ ಚಂದ್ರ ಕಾಣಿಸಿದ ಮೇಲೆ ಈದ್_ಉಲ್_ಫಿತರ್ ಆಚರಿಸುತ್ತಾರೆ. ಅಂದು ಹೊಸ ಬಟ್ಟೆ, ಹೊಸ ಚಪ್ಪಲಿ, ಕೊಂಡುಕೊಳ್ಳುತ್ತಾರೆ. ಸಿರ್‌ಕುರ್ಮಾ ಮಾಡುತ್ತಾರೆ. ಬಡವರಿಗೆ ದವಸ, ಧಾನ್ಯ, ಬಟ್ಟೆ, ಹಣ ದಾನ ಮಾಡುತ್ತಾರೆ. ಇದು ರಮ್ಜಾನ್ ಹಬ್ಬದ ವಿಶೇಷ



**ಗೋಪಿ** : ಬಹಳ ಚೆನ್ನಾಗಿದೆ,

**ಜಾನ್** : ತಾತ, ನಾವೂ ಸಹ ಇಂತಹುದೇ ಕ್ರಿಸ್‌ಮಸ್ ಹಬ್ಬ ಆಚರಿಸುತ್ತೇವೆ. ಕ್ರಿಸ್‌ಮಸ್ ಹಬ್ಬಕ್ಕೆ ಮನೆ ಸಿಂಗರಿಸುತ್ತೇವೆ. ಮರಗಳಿಗೆ ದೀಪಗಳನ್ನೆಲ್ಲಾ ಹಾಕಿ ಸಿಂಗಾರ ಮಾಡುತ್ತೇವೆ. ಅದು ಏಸು ಕ್ರಿಸ್ತನ ಹುಟ್ಟುಹಬ್ಬ. ಕ್ರಿಸ್‌ಮಸ್‌ಗಾಗಿ ಸಾಂತಾಕ್ಲಾಜ್ ತಾತ ಬರುತ್ತಾನೆ. ಮಕ್ಕಳಿಗೆ ಸಿಹಿ ತಿನಿಸು ಕೊಡುತ್ತಾನೆ. ಹಾಡುತ್ತಾನೆ, ನಗಿಸುತ್ತಾನೆ, ಆಟ ಆಡಿಸುತ್ತಾನೆ. ಆತನು ಬಂದರೆ ಖುಷಿಯೋ ಖುಷಿ.

**ತಾತ** : ಇನ್ನೊಂದು ಮಕ್ಕಳ ಹಬ್ಬವಿದೆ. ನೆನಪಿದೆಯಾ?

**ಗಂಗಾ** : ಅದೇ ರಾಖಿ ಹಬ್ಬ, ಹುಡುಗಿಯರು ಅಣ್ಣ ತಮ್ಮಂದಿರುಗಳಿಗೆ ರಾಖಿಯನ್ನು ಕಟ್ಟುತ್ತಾರೆ. ಸಿಹಿ ತಿನಿಸುತ್ತಾರೆ. ಕಾಣಿಕೆಗಳನ್ನು ಪಡೆಯುತ್ತಾರೆ. ಎಲ್ಲೆಡೆ ಹುಡುಗ, ಹುಡುಗಿಯರದ್ದೇ ಗದ್ದಲ, ಸಂಭ್ರಮ!

**ಜಾಫರ್** : ರಾಖಿ ಏಕೆ ಕಟ್ಟುತ್ತಾರೆ ತಾತ?

**ತಾತ** : ಅಣ್ಣ ತಂಗಿಯ ಬಾಂಧವ್ಯ ಗಟ್ಟಿಯಾಗಲಿ, ಅವರ ರಕ್ಷಣೆ ಮಾಡಲಿ ಎಂದು ಕಟ್ಟುತ್ತಾರೆ. ಇತರೆ ದೊಡ್ಡ ಹಬ್ಬಗಳು ಯಾವುವು?

**ಗೋಪಿ** : ದಸರಾ, ಯುಗಾದಿ, ಸಂಕ್ರಾಂತಿ, ಗುಡ್‌ಫ್ರೈಡೆ, ಈದ್–ಮಿಲಾದ್ ಮುಂತಾದವು.

**ತಾತ** : ಗೋಪಿ ಈ ದೇಶದಲ್ಲಿ ಎಲ್ಲ ಜನಾಂಗದವರು ಹಾಗೂ ಸರ್ಕಾರ ಆಚರಿಸುವ ರಾಷ್ಟ್ರೀಯ ಹಬ್ಬಗಳು ಯಾವುವು?

**ಗೋಪಿ** : ಸ್ವಾತಂತ್ರ್ಯೋತ್ಸವ, ಗಣರಾಜ್ಯ, ಮಕ್ಕಳ ದಿನಾಚರಣೆ ಹಾಗೂ ಶಿಕ್ಷಕರ ದಿನಾಚರಣೆಯ ಹಬ್ಬಗಳು.

**ತಾತ** : ಜಾನ್ ನೀನು ಮಕ್ಕಳ ದಿನಾಚರಣೆ ಬಗ್ಗೆ ಹೇಳು.

**ಜಾನ್** : ...................................................................................... (ಹೇಳುವನು)

**ತಾತ** : ಜಾಫರ್, ನೀನು ಗಣರಾಜ್ಯ ಹಬ್ಬದ ಬಗ್ಗೆ ಹೇಳು.

**ಜಾಫರ್** : ...................................................................................... (ಹೇಳುವನು).

**ತಾತ** : ಗಂಗಾ ನೀನು ಶಿಕ್ಷಕರ ದಿನದ ಮಹತ್ವದ ಬಗ್ಗೆ ಹೇಳು?

**ಗಂಗಾ** : ...................................................................................... (ಹೇಳುವಳು.)

**ತಾತ** : ಈ ದೇಶದ ಮುಖ್ಯ ಹಬ್ಬವಾದ ಸ್ವಾತಂತ್ರ್ಯದಿನೋತ್ಸವ ಬಗ್ಗೆ ಎಲ್ಲರೂ ಒಂದೊಂದು ವಾಕ್ಯ ಹೇಳಿರಿ.

**ಜಾನ್** : ...................................................................................... (ಹೇಳುವನು.)

**ಜಾಫರ್** : ...................................................................................... (ಹೇಳುವನು.)

**ಗೋಪಿ** : ...................................................................................... (ಹೇಳುವನು.)

**ಗಂಗಾ** : ...................................................................................... (ಹೇಳುವಳು.)

(**ಅಧ್ಯಾಪಕರಿಗೆ ಸೂಚನೆ :** ಖಾಲಿ ಬಿಟ್ಟ ಸ್ಥಳಗಳಲ್ಲಿ ಮಕ್ಕಳು ಏನು ಹೇಳಬಹುದು ಎಂದು ಊಹಿಸಿ ಕೊಂಡು ಉತ್ತರಗಳನ್ನು ತರಗತಿಯಲ್ಲಿ ಪಡೆಯುಬೇಕು. ಉತ್ತರಿಸಲು ಸಹಾಯವಾಗುವಂತೆ ಸಹಕರಿಸಿರಿ. ರಾಷ್ಟ್ರೀಯ ಹಬ್ಬಗಳ ದಿನಾಂಕಗಳನ್ನು ಕೇಳಿ ಉತ್ತರ ಪಡೆಯಿರಿ.)

## ಓದಿ–ತಿಳಿ

ಸಂಕೇತ–ಸೂಚಕ, ಅದ್ದೂರಿ–ವೈಭವ, ವಠಾರ–ಮನೆಯ ಗುಂಪುಗಳು, ದುಂಬಾಲು–ಬೆನ್ನತ್ತು, ಹಿಂದೆ ಬೀಳು, ಹಿನ್ನೆಲೆ–ಪೂರ್ವಾಪರ.

## ಗಮನಿಸಿ–ತಿಳಿ

ವರಾಂಡ – ಪಡಸಾಲೆ, ಮನೆಯ ಹೊರಭಾಗ.

ತಳಿರು ತೋರಣ – ಮಾವಿನ ಎಲೆಯ ಸುಂದರ ಹಾರ. ಇದನ್ನು ಬಾಗಿಲಿಗೆ ಕಟ್ಟುವರು.

ಸಿರ್ ಕುರ್ಮಾ – ಶ್ಯಾವಿಗೆಯಿಂದ ಮಾಡಿದ ಸಿಹಿ ಪಾಯಸ

ರಾಷ್ಟ್ರೀಯ ಹಬ್ಬಗಳು – ದೇಶಕ್ಕೆ ದೇಶವೇ ಆಚರಿಸುವ ಹಬ್ಬಗಳು. ಸರ್ಕಾರ ಅಧಿಕೃತವಾಗಿ ಆಚರಿಸುತ್ತದೆ.

## ಅಭ್ಯಾಸ

### ೧. ಈ ಕೆಳಕಂಡ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಹೇಳಿರಿ.

ಅ) ಮಕ್ಕಳಿಗೆ ದಾಸಪ್ಪ ತಾತನಿಂದ ಏನು ಕೇಳಲು ಪ್ರೀತಿ ?

ಆ) ದೀಪ ಯಾವುದರ ಸಂಕೇತ ?

ಇ) ಜಾನ್‌ನ ಮನೆಯಲ್ಲಿ ಆಚರಿಸುವ ಹಬ್ಬಗಳು ಯಾವುವು ?

ಈ) ರಮ್ಜಾನ್ ಹಬ್ಬದ ವಿಶೇಷವೇನು ?

ಉ) ಅಣ್ಣ ತಂಗಿ ಬಾಂಧವ್ಯದ ಹಬ್ಬ ಯಾವುದು ?

ಊ) ರಾಷ್ಟ್ರೀಯ ಹಬ್ಬಗಳು ಯಾವುವು ?

### ೨. ಹೊಂದಿಸಿ ಬರೆಯಿರಿ.

| ಅ | ಆ | |
|---|---|---|
| ಅ) ಯುಗಾದಿ ಆಚರಣೆ | ೧) ಆಗಸ್ಟ್ ೧೫ | .................................... |
| ಆ) ಗಣರಾಜ್ಯ ದಿನಾಚರಣೆ | ೨) ನವಂಬರ್ ೧೪ | .................................... |
| ಇ) ಸ್ವಾತಂತ್ರೋತ್ಸವ ದಿನಾಚರಣೆ | ೩) ಡಿಸೆಂಬರ್ ೨೫ | .................................... |
| ಈ) ಮಕ್ಕಳ ದಿನಾಚರಣೆ | ೪) ಜನವರಿ ೨೬ | .................................... |
| ಉ) ಕ್ರಿಸಮಸ್ ಆಚರಣೆ | ೫) ಚೈತ್ರ ಶುದ್ಧ ಪಾಡ್ಯ | .................................... |

೩. ಕೆಳಗೆ ಕೊಟ್ಟ ಪದಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಉಪಯೋಗಿಸಿ ಬರೆಯಿರಿ.

ಅ) ತಳಿರು ತೋರಣ ..............................................................................

ಆ) ಸಂತೋಷ ..............................................................................

ಇ) ಸಿಂಗಾರ ..............................................................................

ಈ) ಗದ್ದಲ ..............................................................................

ಉ) ದಾನ ..............................................................................

೪. ರಾಷ್ಟ್ರೀಯ ಹಬ್ಬಗಳು. ಗಮನಿಸಿ ಓದಿ.

**ಗಣರಾಜ್ಯೋತ್ಸವ ಹಬ್ಬ :** ಈ ದೇಶವು ಪ್ರಜಾ ಪ್ರಭುತ್ವವನ್ನು ಆಯ್ಕೆ ಮಾಡಿಕೊಂಡ ದಿನ. ೧೯೫೦ ಜನವರಿ ೨೬. ದೇಶದ ಆಡಳಿತಕ್ಕಾಗಿ ಸಂವಿಧಾನ ರಚಿಸಿ ಅದರಂತೆ ಆಡಳಿತ ಪ್ರಾರಂಭಿಸಲಾಗಿದೆ. ಅಂದು ದೇಶದ ಪ್ರಗತಿಯ ಬಗ್ಗೆ ಮೆಲಕು ಹಾಕುವ ದಿನ. ಹೊಸಹೊಸ ವಿಚಾರಗಳನ್ನು ರಾಷ್ಟ್ರಾಧ್ಯಕ್ಷರು ನೀಡುತ್ತಾರೆ. ಸಾರ್ವಜನಿಕ ಸ್ಥಳಗಳಲ್ಲಿ ಧ್ವಜಾರೋಹಣ ಮಾಡುತ್ತಾರೆ.

**ಸ್ವಾತಂತ್ರ್ಯೋತ್ಸವದ ಹಬ್ಬ :** ಈ ದೇಶವು ೧೯೪೭ರ ಆಗಸ್ಟ ೧೫ರಂದು ಸ್ವತಂತ್ರವಾಯಿತು. ಇದು ಆ ದಿನವನ್ನು ನೆನಪಿಸುವ ಹಬ್ಬ. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದವರ ಸ್ಮರಣೆ ಮಾಡುತ್ತಾರೆ. ಮನೆ ಮನೆಯಲ್ಲಿ ದೀಪ ಹಚ್ಚಿ ಸ್ವಾತಂತ್ರ್ಯವನ್ನು ಸಂಭ್ರಮಿಸುತ್ತಾರೆ. ಸಾರ್ವಜನಿಕ ಸ್ಥಳಗಳಲ್ಲಿ ಧ್ವಜಾರೋಹಣ ಮಾಡುತ್ತಾರೆ.

**ಶಿಕ್ಷಕರ ದಿನ (ಸೆಪ್ಟೆಂಬರ್ ೫):** ದೇಶದ ನಾಳಿನ ಭವಿಷ್ಯವು ಇಂದು ತರಗತಿ ಕೋಣೆಯಲ್ಲಿ ಕಟ್ಟಲ್ಪಡುತ್ತದೆ. ಇದಕ್ಕೆ ಶಿಕ್ಷಕರೇ ಕಾರಣ, ಅವರನ್ನು ಗೌರವಿಸಬೇಕು, ಪ್ರೀತಿಸಬೇಕು ಎಂದು ಭಾರತದ ಎರಡನೆಯ ರಾಷ್ಟ್ರಪತಿ ಡಾ|| ರಾಧಾಕೃಷ್ಣನ್‌ರು ತಮ್ಮ ಹುಟ್ಟಿದ ದಿನವನ್ನು ಶಿಕ್ಷಕರ ದಿನಾಚರಣೆ ಎಂದು ಜಾರಿಗೆ ತಂದರು. ದೇಶಕ್ಕೆ ದೇಶವೇ ಶಿಕ್ಷಕರನ್ನು ಗೌರವಿಸುವ ದಿನ ಸೆಪ್ಟೆಂಬರ್ ೫.

**ಮಕ್ಕಳ ದಿನ (ನವೆಂಬರ ೧೪) :** ಇಂದಿನ ಮಕ್ಕಳೆ ನಾಳಿನ ನಾಯಕರು. ಅವರ ಬೆಳವಣಿಗೆಯ ಬಗ್ಗೆ ಕಾಳಜಿ ವಹಿಸಲಿ ಎಂದು ಭಾರತದ ಮೊದಲ ಪ್ರಧಾನಿ ಜವಾಹರಲಾಲ ನೆಹರುರವರು ತಮ್ಮ ಜನ್ಮದಿನವನ್ನು ಮಕ್ಕಳ ದಿನವೆಂದು ಆಚರಿಸಿದರು. ಮಕ್ಕಳ ಹಕ್ಕುಗಳನ್ನು, ಸುಖ ಸಂತೋಷಗಳನ್ನು, ಅವರ ಕನಸುಗಳನ್ನು ಪುರಸ್ಕರಿಸುವ ದಿನವಿದು, ನವೆಂಬರ ೧೪.

೫. ಶಾಲೆಯಲ್ಲಿ ಆಚರಿಸುವ ರಾಷ್ಟ್ರೀಯ ಹಬ್ಬಗಳ ಪಟ್ಟಿ –ಮಾಡಿ ಈ ಕೆಳಗಿನ ಅಂಕಣಗಳನ್ನು ತುಂಬಿರಿ.

| ರಾಷ್ಟ್ರೀಯ ಹಬ್ಬಗಳು | ಆಚರಿಸುವ ದಿನ | ಅದರ ಮಹತ್ವ |
|---|---|---|
| ಗಣರಾಜ್ಯದ ಹಬ್ಬ | .......................... | ....................................................... |
| ಸ್ವಾತಂತ್ರ್ಯದ ಹಬ್ಬ | .......................... | ....................................................... |
| ಶಿಕ್ಷಕರ ದಿನಾಚರಣೆ | .......................... | ....................................................... |
| ಮಕ್ಕಳ ದಿನಾಚರಣೆ | .......................... | ....................................................... |
| ಗಾಂಧೀ ಜಯಂತಿ | .......................... | ....................................................... |
| ಡಾ॥ ಅಂಬೇಡ್ಕರ ಜಯಂತಿ | .......................... | ....................................................... |

೬. ಈ ಕೆಳಗೆ ನೀಡಿರುವ ಅಂಕಣಗಳನ್ನು ಆಯಾ ಧಾರ್ಮಿಕ ಹಬ್ಬಗಳಲ್ಲಿ ತಯಾರಿಸುವ ವಿಶೇಷ ತಿಂಡಿಗಳನ್ನು ಮತ್ತು ಪ್ರಾರ್ಥಿಸುವ ದೇವರುಗಳ ಹೆಸರುಗಳನ್ನು ಬರೆಯಿರಿ

| ಹಬ್ಬಗಳು | ಪ್ರಾರ್ಥಿಸುವ ದೇವರು | ವಿಶೇಷ ಅಡುಗೆಗಳು |
|---|---|---|
| ಯುಗಾದಿ | | |
| ಸಂಕ್ರಾಂತಿ | | |
| ಗೌರಿಗಣೇಶ | | |
| ವರಮಹಾಲಕ್ಷ್ಮೀ | | |
| ಬಕ್ರೀದ್ | | |
| ಶ್ರೀಕೃಷ್ಣ ಜನ್ಮಾಷ್ಟಮಿ | | |
| ದಸರಾ | | |
| ಗುಡ್ ಫ್ರೈಡೆ | | |

೭. ನಿಮ್ಮ ಅಜ್ಜ ಮತ್ತು ಅಜ್ಜಿಯ ಭಾವಚಿತ್ರಗಳನ್ನು ಈ ಕೆಳಗಿನ ಅಂಕಣಗಳಲ್ಲಿ ಅಂಟಿಸಿ.



ಅಜ್ಜನ ಭಾವಚಿತ್ರ



ಅಜ್ಜಿಯ ಭಾವಚಿತ್ರ

ಅವರಿಗೆ ನೀವು ಸಲ್ಲಿಸುವ ಸೇವೆ ಬರೆಯಿರಿ.

..............................................................................................

..............................................................................................



೮. ಇವುಗಳನ್ನು ಸ್ಪಷ್ಟವಾಗಿ ಓದಿರಿ.

ಅ) ರಾಮನು ಶಾಲೆಗೆ ಹೋಗುತ್ತಾನೆ.

ಆ) ರೀಟಾ ಇಂಗ್ಲೀಷ್ ಪುಸ್ತಕವನ್ನು ಓದಬಹುದು.

ಇ) ಅನ್ವರ ಸುಂದರವಾದ ಚಿತ್ರವನ್ನು ಬಿಡಿಸುತ್ತಿದ್ದನು.

೯. ಈ ಪದಗಳ ಸಹಾಯದಿಂದ ಸರಿಯಾದ ವಾಕ್ಯ ರಚಿಸು.

ಅ) ಕಡಿದನು, ಕೊಡಲಿಯಿಂದ, ತಿರುಮಲನು, ಕಟ್ಟಿಗೆ

ಆ) ಹಾಕಿದಳು, ರಂಗವಲ್ಲಿ, ಸುಂದರವಾದ, ಶಾರದೆ.

ಇ) ಮನೆಯನ್ನು, ಕ್ರಿಸಮಸ್, ಸಿಂಗರಿಸುತ್ತಾರೆ, ಹಬ್ಬಕ್ಕೆ

ಈ) ಕಟ್ಟುತ್ತಾರೆ, ರಾಖಿಯನ್ನು, ಅಣ್ಣ-ತಮ್ಮಂದಿರುಗಳಿಗೆ

## ೧೦. ಸರಿಯಾದ ಪದ ಆಯ್ಕೆ ಮಾಡಿ, ಬಿಟ್ಟ ಸ್ಥಳಗಳನ್ನು ತುಂಬಿರಿ.

ಅ. ದೀಪಾವಳಿ ಎಂದರೆ ........................................
(ದೀಪಗಳ ಉತ್ಸವ, ಕತ್ತಲಿನ ಉತ್ಸವ, ಕಂಚಿನ ಉತ್ಸವ, ಪಟಾಕಿ ಉತ್ಸವ)

ಆ. ರಾಖಿ ಹಬ್ಬದ ಉದ್ದೇಶ ........................................ ಗಟ್ಟಿಗೊಳಿಸುವುದು.
(ಗೆಳೆತನ, ಬಾಂಧವ್ಯ, ವೈರತ್ವ, ಪ್ರೀತಿ)

ಇ. ಸಾಂತಾಕ್ಲಾಜ್ ತಾತ ಬರುವ ಹಬ್ಬ ........................................
(ಸಂಕ್ರಾಂತಿ, ಗೆಳೆಯರ ದಿನ, ಕ್ರಿಸ್‌ಮಸ್)

ಈ. ಬಡವರಿಗೆ ದವಸ, ಧಾನ್ಯ, ಬಟ್ಟೆ, ಹಣ, ದಾನಮಾಡುವ ಹಬ್ಬ ........................
(ರಮ್ಜಾನ್, ಸಂಕ್ರಾಂತಿ, ಕ್ರಿಸ್‌ಮಸ್, ಗೆಳೆಯರ ದಿನ)

ಉ. ಶಿಕ್ಷಕರ ದಿನ ........................................
(ಜನವರಿ ೨೬, ಆಗಸ್ಟ್ ೧೫, ನವೆಂಬರ್ ೧೪, ಸೆಪ್ಟೆಂಬರ್ ೫)

## ೧೧. ಶಿಕ್ಷಕರ ದಿನವನ್ನು ನೀವು ಆಚರಿಸುವ ರೀತಿ ಬರೆಯಿರಿ.



................................................................................................

................................................................................................

................................................................................................

................................................................................................

................................................................................................

................................................................................................

................................................................................................

................................................................................................



## ಪದ್ಯ ಪಾಠ – ೭

# ಸವಿಯಾಗು ಸವಿಯಾಗು



ಹಣ್ಣಿನಲಿ ಬೆಣ್ಣೆಯಲಿ ಕೆನೆಮೊಸರು ಹಾಲಿನಲಿ
ಕಂದದಲಿ ಜೇನಿನಲಿ ರಸಗಬ್ಬು ಬಾಳೆಯಲಿ
ಎಳೆ ನೀರು ಹೊಳೆನೀರು ಹಾಲ್ದೆನೆಯ ಕಾಳಿನಲಿ
ಸಾರುತಿದೆ ಸೃಷ್ಟಿಯಿದು ಸವಿಯಾಗಿ ನಿಂದು
ಸವಿಯಾಗು ಸವಿಯಾಗು ಸವಿಯಾಗು ! ಎಂದು. ॥೧॥

ತಾರೆಯಲಿ ಚಂದ್ರನಲಿ ಸೂರ್ಯನಲಿ ರನ್ನದಲಿ
ಕಂಚಿನಲಿ ಮಿಂಚಿನಲಿ ಮುತ್ತಿನಲಿ ಚಿನ್ನದಲಿ
ಜ್ಯೋತಿಯಲಿ ನಯನದಲಿ ಉಷೆಯ ಹೊಂಬಣ್ಣದಲಿ
ಸಾರುತಿದೆ ಸೃಷ್ಟಿಯಿದು ಛವಿಯಾಗಿ ನಿಂದು
ಛವಿಯಾಗು ಛವಿಯಾಗು, ಛವಿಯಾಗು ! ಎಂದು ॥೨ ॥

ಶಬ್ದದಲಿ ಸವಿಯಾಗಿ ಅರ್ಥದಲಿ ಬೆಳಕಾಗಿ
ಬಾಳ ಭವ್ಯತೆಗಿಲ್ಲಿ ಬೆಳಕು ಸವಿ ಸಾಕಾಗಿ
ಬಾಳುವೆಯ ಸವಿ ಬೆಳಕ ಬರೆಯುವವ ಬೇಕಾಗಿ
ಸಾರುತಿದೆ ಸೃಷ್ಟಿ ಸವಿ ಛವಿಯಾಗಿ ನಿಂದು–
ಕವಿಯಾಗು ಕವಿಯಾಗು ಕವಿಯಾಗು ! ಎಂದು ॥ ೩ ॥

– ಸಿದ್ದಯ್ಯ ಪುರಾಣಿಕ

## ಕವಿ ಕೃತಿ ಪರಿಚಯ : ಸಿದ್ದಯ್ಯ ಪುರಾಣಿಕ



ಕವಿ ಸಿದ್ದಯ್ಯ ಪುರಾಣಿಕರು ಕೊಪ್ಪಳ ಜಿಲ್ಲೆಯ ಯಲಬುರ್ಗ ತಾಲೂಕಿನ ದ್ಯಾಂಪುರದವರು. 'ಕಾವ್ಯಾನಂದ' ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದವರು. ಹೊಸಗನ್ನಡ ಗದ್ಯ, ಪದ್ಯ, ಸಾಹಿತ್ಯಕ್ಕೆ ಗಮನಾರ್ಹ ಕೊಡುಗೆ ನೀಡಿದ್ದಾರೆ. ಕಾವ್ಯ, ನಾಟಕ, ಪ್ರಬಂಧ, ಜೀವನಚರಿತ್ರೆ, ಮತ್ತು ವಚನ ರಚಿಸಿದ್ದಾರೆ. ಇವರ 'ಶರಣ ಚರಿತಾಮೃತ' ಕೃತಿಯು ಹೊಸಗನ್ನಡ ಗದ್ಯ ಸಾಹಿತ್ಯಕ್ಕೆ ದೊಡ್ಡ ಕೊಡುಗೆ. ಜಲಪಾತ, ಕರುಣಾ ಶ್ರವಣ, ಮಾನಸ ಸರೋವರ, ಮೊದಲು ಮಾನವನಾಗು ಮುಂತಾದವು ಇವರ ಕವನ ಸಂಕಲನಗಳು. 'ಭಿಲ್ವಾರ' ಪ್ರಶಸ್ತಿ ಮತ್ತು ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ಲಭಿಸಿವೆ.

ಈ ಪದ್ಯವನ್ನು 'ಕರುಣಾಶ್ರವಣ' ಕವನ ಸಂಕಲನದಿಂದ ಆಯ್ದುಕೊಳ್ಳಲಾಗಿದೆ. ಕವಿತೆಯಲ್ಲಿ ನಿಸರ್ಗದ ಮೂಲಕ ಕವಿ ಸಂದೇಶವನ್ನು ನೀಡುತ್ತಿದ್ದಾರೆ. ಮೊದಲ ನುಡಿಯಲ್ಲಿ ಸಿಹಿರುಚಿಯನ್ನು ಹೊಂದಿರುವ ವಸ್ತುಗಳ ಮೂಲಕ ಮಾನವನು ಸಿಹಿಯಾಗು ಎನ್ನುತ್ತಾರೆ. ಎರಡನೆಯ ನುಡಿಯಲ್ಲಿ ಬೆಳಕನ್ನು ಕೊಡುವ ವಸ್ತುಗಳ ಉದಾಹರಣೆ ನೀಡುತ್ತಾರೆ. ಅದರಂತೆ ಮಾನವ ನಿನ್ನಲ್ಲಿ ಜ್ಞಾನದ ಬೆಳಕನ್ನು ಹೆಚ್ಚಿಸಿಕೋ ಎಂದು ಹೇಳುತ್ತಾರೆ. ಕೊನೆಯ ನುಡಿಯಲ್ಲಿ ಸವಿಯಾದ ಗುಣಗಳನ್ನು ರೂಢಿಸಿಕೊಂಡು ಅರ್ಥಪೂರ್ಣವಾಗಿ ಬರೆಯುವ ಕವಿಯಾಗು ಎಂದು ಸಾರುತ್ತಾರೆ.



### ಓದಿ– ತಿಳಿ :

ಕಂದ– ಗಡ್ಡೆ, ಸಾರು – ಘೋಷಿಸು, ಸೃಷ್ಟಿ– ಪ್ರಕೃತಿ, ರಚನೆ, ಸವಿ–ರುಚಿ, ಸಿಹಿ, ತಾರೆ– ನಕ್ಷತ್ರ, ರನ್ನ–ರತ್ನ, ಜ್ಯೋತಿ– ಬೆಳಕು, ದೀಪ, ನಯನ – ಕಣ್ಣು, ಅಕ್ಷಿ, ಉಷೆ – ಅರುಣೋದಯ, ಛವಿ – ಹೊಳಪು, ಕಾಂತಿ, ಬಣ್ಣ, ಭವ್ಯ – ಉನ್ನತವಾದ.

### ಗಮನಿಸಿ ತಿಳಿ :

ಕೆನೆಮೊಸರು – ಕೆನೆ ಸಹಿತವಾದ ಮೊಸರು, ರಸಗಬ್ಬು – ರಸಪೂರಿತವಾದ ಕಬ್ಬು, ಹಾಲ್ದೆನೆ–ಎಳೆಯ ಕಾಳುಗಳಿಂದ ಕೂಡಿದ ತೆನೆ, ಹೊಂಬಣ್ಣ – ಬಂಗಾರದ ಬಣ್ಣ.

### ಅಭ್ಯಾಸ

**೧. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

ಅ) ಕವಿ, ಸೃಷ್ಟಿಯ ಯಾವ ಯಾವ ವಸ್ತುಗಳಲ್ಲಿ ಸವಿಯಿದೆ ಎನ್ನುತ್ತಾರೆ ?

ಆ) ಯಾವ ಯಾವ ವಸ್ತುಗಳಲ್ಲಿ ಪ್ರಕೃತಿ ಛವಿಯಾಗಿ ನಿಂತಿದೆ?

ಇ) ಶಬ್ದ ಹೇಗಿರಬೇಕೆಂದು ಕವಿ ಹೇಳುತ್ತಾರೆ ?

ಈ) ಬಾಳುವೆಯ ಸವಿಬೆಳಕನ್ನು ಎಲ್ಲಿ ಕಾಣಬೇಕು?

ಉ) ಯಾವುದನ್ನು ಬರೆಯುವ ಕವಿ ಬೇಕಾಗಿದ್ದಾನೆ?

**೨. ಕೆಳಗಿನವುಗಳಿಗೆ ಸೂಚನೆಯಂತೆ ಉತ್ತರಿಸಿರಿ.**

ಅ) "ಸವಿಯಾಗು,ಸವಿಯಾಗು ಸವಿಯಾಗು !"

ಇದಕ್ಕೆ ಕವಿ ಕೊಡುವ ಉದಾಹರಣೆ ಹೇಳಿರಿ

ಬ) "ಸಾರುತಿದೆ ಸೃಷ್ಟಿಯಿದು ಛವಿಯಾಗು ನಿಂದು,"

ಇದಕ್ಕೆ ಕವಿ ಕೊಡುವ ಉದಾಹರಣೆ ಹೇಳಿರಿ

ಕ) "ಬಾಳುವೆಯ ಸವಿ ಬೆಳಕು ಬರೆಯುವವ ಬೇಕಾಗಿ" ಎನ್ನುವಲ್ಲಿ ಕವಿಯ ಆಶಯ ಹೇಳಿರಿ.

**೩. ಬಿಟ್ಟ ಸ್ಥಳ ತುಂಬಿ, ನುಡಿ ಪೂರ್ತಿ ಮಾಡಿರಿ.**

ಹಣ್ಣಿನಲಿ ..........................................................

..........................................................

..........................................................

.................................... ಸವಿಯಾಗು ಎಂದು



**೪. ಈ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿರಿ.**

ಅ) ಸಾರು : ..........................................................................

ಆ) ಸೃಷ್ಟಿ : ..........................................................................

ಇ) ಸವಿ : ..........................................................................

ಈ) ಹೊಂಬಣ್ಣ : ..........................................................................

ಇ) ಛವಿ : ..........................................................................

೫. ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.

ಅ) ಪ್ರಕೃತಿ ಎಲ್ಲೆಲ್ಲಿ ಸವಿಯಾಗಿದೆ ?

.....................................................................................................

ಆ) ಛವಿಯನ್ನು ಯಾವ ಯಾವ ವಸ್ತುಗಳಲ್ಲಿ ಕಾಣುತ್ತೇವೆ ?

.....................................................................................................

ಇ) ಎಂತಹದ್ದನ್ನು ಬರೆಯಬೇಕು ಎಂದು ಕವಿ ಬಯಸುತ್ತಾನೆ?

.....................................................................................................

೬. ಸರಿಯಾದ ಪದವನ್ನು ಆರಿಸಿ ಬಿಟ್ಟ ಸ್ಥಳ ತುಂಬಿರಿ.

ಅ) ಸವಿಯಿರುವುದು ..............................

೧) ಹಣ್ಣಿನಲಿ, ಬೆಣ್ಣೆಯಲಿ ೨) ತಾರೆಯಲಿ, ಚಂದ್ರನಲಿ

೩) ಕಲ್ಲಿನಲಿ, ಮುಳ್ಳಿನಲಿ ೪) ಮುತ್ತಿನಲಿ, ಚಿನ್ನದಲಿ

ಆ) ಎಳೆನೀರು ಹೊಳೆನೀರು ಹಾಲ್ದೆನೆಯ ಕಾಳಿನಲಿ ............................ ಸೃಷ್ಟಿ ಸವಿಯಾಗಿ ನಿಂದು

೧) ತೋರುತಿದೆ ೨) ಹಾಡುತಿದೆ ೩) ಸಾರುತಿದೆ ೪) ಹೇಳುತಿದೆ

ಇ) ಛವಿ ಇರುವುದು ..............................

೧) ಕಂದದಲಿ – ಜೇನಿನಲಿ ೨) ತಾರೆಯಲಿ – ಚಂದ್ರನಲಿ

೩) ಹಾಲ್ದೆನೆಯ – ಕಾಳಿನಲಿ ೪) ಕಲ್ಲಿನಲಿ – ಮುಳ್ಳಿನಲಿ

ಈ) ಶಬ್ದದಲಿ ಸವಿಯಾಗಿ ಅರ್ಥದಲಿ .............................. ಎಂದು ಕವಿ ಹೇಳುವನು.

೧) ಸಿಹಿಯಾಗಿ ೨) ಸವಿಯಾಗಿ ೩) ಒಗರಾಗಿ ೪) ಬೆಳಕಾಗಿ

ಉ) ಬಾಳುವೆಯ ಸವಿ ಬೆಳಕ .............................. ಬೇಕಾಗಿದೆ.

೧) ಓದುವವ ೨) ನೋಡುವವ ೩) ಕೇಳುವವ ೪) ಬರೆಯುವ

## ೭. ಕವಿತೆ ಓದಿ ಸರಿಯಾದ ಪ್ರಾಸ ಪದಗಳನ್ನು ಹುಡುಕಿ ಬರೆಯಿರಿ.

**ಮಾದರಿ : ಹಣ್ಣಿನಲಿ – ಬೆಣ್ಣೆಯಲಿ**

ಎಳೆ ನೀರು – ............................... ಕಂಚು – ...............................

ಸವಿ – ...............................

## ೮. ಈ ಚಿತ್ರಗಳಿಗೆ ಚಿತ್ರ ನುಡಿ ಬರೆಯಿರಿ.







............................... ............................... ...............................



## ೯. ಈ ಪದಗಳನ್ನು ಬಿಡಿಸಿ ಬರೆದಿದೆ ಗಮನಿಸಿ ಓದಿ.

ಅ) ಹಾಲ್ದೆನೆ= ಹಾಲು + ತೆನೆ

ಆ) ಹೊಸಗನ್ನಡ = ಹೊಸ + ಕನ್ನಡ

ಇ) ಎಳೆಗರು = ಎಳೆ +ಕರು

ಈ) ಮೈದೊಳೆ = ಮೈ + ತೊಳೆ

ಉ) ಹೂ ಬುಟ್ಟಿ = ಹೂ + ಪುಟ್ಟಿ

## ೧೦. ಕಥೆ ಓದಿ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.

ಮಾವಿನತೋಪು. ಇಡೀ ತೋಪು ಮಾವಿನಕಾಯಿ ಹಣ್ಣುಗಳಿಂದ ತುಂಬಿತ್ತು. ಅದು ನೋಟಕರ ಕಣ್ಮನ ಸೆಳೆಯುತ್ತಿತ್ತು. ಮಕ್ಕಳು ಹಣ್ಣನ್ನು ಪಡೆಯಲು ಕಲ್ಲು ಬೀಸುತ್ತಿದ್ದರು. ಒಬ್ಬ ಹುಡುಗಿ ಮಾವಿನ ಹಣ್ಣಿಗಾಗಿ ಕಲ್ಲು ಬೀಸಿದಳು. ಆ ಸಂದರ್ಭದಲ್ಲಿ ಅದೇ ರಸ್ತೆಯಲ್ಲಿ ಹೋಗುತ್ತಿದ್ದ ರಾಜನಿಗೆ ಕಲ್ಲು ಬಡಿಯಿತು. ರಾಜನು ಕಲ್ಲು ಬಂದ ದಿಕ್ಕಿಗೆ ನೋಡಿದನು. ಅವನ ಸೈನಿಕರು ಈ ದೃಶ್ಯ ನೋಡಿ ಗಾಬರಿಯಾದರು. ಓಡಿ ಹೋಗಿ ಕಲ್ಲು ಬೀರಿದ ಹುಡುಗಿಯನ್ನು ಹಿಡಿದು ತಂದರು.

ಆ ಹುಡುಗಿಗೆ ಸೈನಿಕರು 'ರಾಜನಿಗೆ ಏಕೆ ಕಲ್ಲು ಬೀಸಿದೆ ? " ಎಂದು ಕೇಳಿದರು. ನಾನು ರಾಜನಿಗೆ ಕಲ್ಲು ಬೀಸಲಿಲ್ಲ. ಮಾವಿನಮರಕ್ಕೆ ಬೀಸಿದೆ. ಅದು ಆಕಸ್ಮಿಕವಾಗಿ ರಾಜನಿಗೆ ಬಡಿದಿದೆ. ಕ್ಷಮಿಸಿ ನನ್ನತಪ್ಪಿಲ್ಲ' ಎಂದಳು.

ಸೈನಿಕರು ರಾಜನಿಗೆ ಕಲ್ಲು ಬೀಸಿದ್ದಕ್ಕೆ ಶಿಕ್ಷೆ ಏನು ಗೊತ್ತೇ? ಛಡಿ ಏಟು ! ಎಂದು ಭಯ ಹುಟ್ಟಿಸಿದರು. ಆಗ ಅವಳು ರಾಜನ ಹತ್ತಿರ ಹೋಗಿ " ಸ್ವಾಮಿ ಮರಕ್ಕೆ ಕಲ್ಲು ಬೀಸಿದರೆ ಅದು ಹಣ್ಣು ಕೊಡುತ್ತದೆ " ಆದರೆ ಆಕಸ್ಮಿಕವಾಗಿ ನಿಮಗೆ ಕಲ್ಲು ಬಿದ್ದುದಕ್ಕೆ ನನಗೆ ಛಡಿ ಏಟು ಕೊಡುವದಾದರೆ ಛಡಿ ಏಟು ಕೊಡಿ, ಎಂದಳು.

ರಾಜನು ಅವಳ ಜಾಣತನಕ್ಕೆ ಮೆಚ್ಚಿದನು. ನೀನು ಜಾಣ ಹುಡುಗಿ. ಮರ ಕಲ್ಲು ಬೀರಿದವರಿಗೆ ಹಣ್ಣು ಕೊಡುತ್ತದೆ. ಆಕಸ್ಮಿಕವಾಗಿ ಕಲ್ಲು ತಗಲಿದ್ದಕ್ಕೆ ಛಡಿ ಏಟು ಕೊಡುವಷ್ಟು ನಾನು ಕಟುಕನಲ್ಲ. ಈ ತೋಟವನ್ನೆ ನಿನಗೆ ಬಹುಮಾನ ಕೊಡುತ್ತೇನೆ ಎಂದು ಅವಳನ್ನು ಸಂತೈಸಿದನು.

## ಪ್ರಶ್ನೆಗಳು

ಅ) ಮಾವಿನತೋಪು ಯಾವುದರಿಂದ ತುಂಬಿತ್ತು ?

ಆ) ಹುಡುಗಿ ಮಾವಿನಮರಕ್ಕೆ ಏಕೆ ಕಲ್ಲು ಎಸೆದಳು?

ಇ) ಆ ಕಲ್ಲು ಯಾರಿಗೆ ಬಡಿಯಿತು ?

ಈ) ಸೈನಿಕರು ಕಲ್ಲು ಹೊಡೆದ ಹುಡುಗಿಗೆ ಯಾವ ಶಿಕ್ಷೆ ಎಂದು ಹೇಳಿದರು?

ಉ) ರಾಜನು ಅವಳ ಬುದ್ಧಿವಂತಿಕೆಗೆ ಮೆಚ್ಚಿ ಏನು ಕೊಟ್ಟನು?





## ಜಿನೇತರಗತಿ ದ್ವಿತೀಯ ಭಾಷೆ ಕನ್ನಡ ಪಠ್ಯಪುಸ್ತಕ ರಚನಾ ವಿವರ ತಃಖ್ತೆ (ಮೊದಲನೆಯ ಸೆಮಿಸ್ಟರ್)

| ಕ್ರ.ಸಂ. | ಪಾಠದ ಹೆಸರು | ಸಾಹಿತ್ಯ | ಪ್ರಮುಖ ಸಾಮರ್ಥ್ಯಗಳು | ಭಾಷಾ ಚಟುವಟಿಕೆಗಳು | ಮೌಲ್ಯಗಳು | ಬೋಧನಾ ವಿಧಾನ | ಅವಧಿ |
|---|---|---|---|---|---|---|---|
| | ಪೂರ್ವ ಸಿದ್ಧತಾ ಪಾಠಗಳು : ಪ್ರಬಂಧ | ೧.ಚುಕ್ಕಿಸೇರಿಸು –ಚಿತ್ರರಚಿಸು<br>೨. ಚಿತ್ರಕಥೆ<br>೩. ಕಥೆ<br>೪. ಕವಿತೆ<br>೫. ಗಾಳಿಪಟ | **ಆಲಿಸುವಿಕೆ :** ಸರಳ ಹಾಗೂ ಬಳಕೆಯಲ್ಲಿರುವ ಜನಪ್ರಿಯ ಪ್ರಾಸಗೀತೆ ಮತ್ತು ಕಥೆಗಳನ್ನು ಆಲಿಸುವುದರ ಜೊತೆಗೆ ಅರ್ಥಮಾಡಿಕೊಳ್ಳುವುದು.<br>**ಮಾತುಗಾರಿಕೆ :** ಪದ ಮತ್ತು ಸರಳ ವಾಕ್ಯಗಳನ್ನು ಉಚ್ಚರಿಸುವುದು. ಚಿತ್ರ ನೋಡಿ ಕಥೆ ಹೇಳುವುದು. | ಆಲಿಸುವಿಕೆ, ಅರ್ಥೈಸುವಿಕೆ, ಮಾತನಾಡುವಿಕೆ, ಸರಳವಾಕ್ಯಗಳನ್ನು ಓದುವಿಕೆ. ಸಜಾತಿ ಒತ್ತಕ್ಷರ ಓದುವಿಕೆ. | ಒಗ್ಗಟ್ಟು ಪರಿಶ್ರಮ ಮುನ್ನಡೆಯುವ ಆಸೆ | ಚಿತ್ರ ನೋಡಿ ಕಥೆ ಹೇಳುವುದು ರಾಗಬದ್ಧವಾಗಿ ಹಾಡು ಅಭಿನಯ. ಸಂವಹನ ಪದ್ಧತಿ | ೧೫ |
| ೧ | ಕನ್ನಡ ನುಡಿ | ಕವಿತೆ | **ಆಲಿಸುವಿಕೆ :** ಸರಳ ಹಾಗೂ ಬಳಕೆಯಲ್ಲಿರುವ ಜನಪ್ರಿಯ ಪ್ರಾಸಗೀತೆ ಮತ್ತು ಕಥೆಗಳನ್ನು ಆಲಿಸುವುದರ ಜೊತೆಗೆ ಅರ್ಥಮಾಡಿಕೊಳ್ಳುವುದು.<br>**ಬರಹ :** ಗುಣಿತಾಕ್ಷರ ಮತ್ತು ಒತ್ತಕ್ಷರಗಳನ್ನು ನಕಲು ಮಾಡುವುದು. ಸರಳ ವಾಕ್ಯಗಳನ್ನು ಬರೆಯುವುದು. | ಪುನರುಚ್ಛರಿಸಿ ಹೇಳುವುದು ಹಾಡುವುದು ಸರಳ ವಾಕ್ಯಗಳ ರಚನೆ | ನಾಡು ನುಡಿ ಅಭಿಮಾನ | ಅಭಿನಯಿಸಿ ಹಾಡುವ ಪದ್ಧತಿ. ಪ್ರಶ್ನೆ ಕೇಳಿ ಉತ್ತರ ಪಡೆ. ಚಿತ್ರ ಓದು. | ೦೬ |
| ೨ | ನನ್ನ ದೇಶ ನನ್ನ ಜನ | ಪ್ರಬಂಧ | **ಆಲಿಸುವಿಕೆ :** ಸರಳ ಮಾಹಿತಿ ಗ್ರಹಿಸುವುದು. ಸರಳ ಪ್ರಶ್ನೆಗಳಿಗೆ ಉತ್ತರ ಪಡೆಯುವದು.<br>**ಬರಹ :** ಸರಳ ಸೂಚನೆ ಅನುಸರಿಸಿ ಬರೆಯುವುದು. | ಗ್ರಹಿಕೆಯ ಚಟುವಟಿಕೆಗಳು ಅಭಿವ್ಯಕ್ತಿಯ ಚಟುವಟಿಕೆಗಳು ಓದು ಹಾಗೂ ಬರಹ | ದೇಶಾಭಿಮಾನ ಬೆಳೆಸುವುದು | ಭಾರತದ ಬಗ್ಗೆ ಮಕ್ಕಳ ವಿಚಾರಗಳನ್ನು ಕೆದಕಿ ಪಾಠ ಮಾಡುವಿಕೆ. ಚಟುವಟಿಕೆ ಮುಖ್ಯ | ೦೬ |

| ಕ್ರ.ಸಂ. | ಪಾಠದ ಹೆಸರು | ಸಾಹಿತ್ಯ | ಪ್ರಮುಖ ಸಾಮರ್ಥ್ಯಗಳು | ಭಾಷಾ ಚಟುವಟಿಕೆಗಳು | ಮೌಲ್ಯಗಳು | ಬೋಧನಾ ವಿಧಾನ | ಅವಧಿ |
|---|---|---|---|---|---|---|---|
| ೩ | ನವಿಲು | ಪರಿಚಯ ಪ್ರಬಂಧ | **ಓದು:** ಸರಳ ಮಾಹಿತಿ ಓದುವದು, ಗ್ರಹಿಸುವುದು.<br>ಬರಹ : ಸರಳ ವಾಕ್ಯಗಳನ್ನು ಬರೆಯುವುದು | ಚಿತ್ರ ನೋಡಿ ವರ್ಣಿಸು. ಚಿತ್ರ ಸಂಗ್ರಹದಿಂದ ಓದು. | ಸೌಂದರ್ಯ ಪ್ರಜ್ಞೆ | ಚಿತ್ರ ನೋಡು ವಿವರಣೆ ನೀಡು ಮತ್ತು ಹರ್ಬರ್ಟನ ಪಂಚ ಸೋಪಾನಗಳು | ೦೮ |
| ೪ | ಗೂಡಿನಿಂದ ಬಾನಿನೆಡೆಗೆ | ಕವಿತೆ | **ಮಾತನಾಡುವುದು :** ಸರಳ ಹಾಗೂ ಬಳಕೆಯಲ್ಲಿರುವ ಜನಪ್ರಿಯ ಪ್ರಾಸಗೀತೆ ಮತ್ತು ಕಥೆಗಳನ್ನು ಆಲಿಸುವುದರ ಜೊತೆಗೆ ಅರ್ಥಮಾಡಿಕೊಳ್ಳುವುದು. ಹಾಗೂ ಸಾಮೂಹಿಕವಾಗಿಯೂ ವೈಯಕ್ತಿಕವಾಗಿಯೂ ಹಾಡುವದು<br>ಆಲಿಸುವಿಕೆ : ಪದ್ಯದಲ್ಲಿ ಸರಳ ಮಾಹಿತಿಯನ್ನು ಗ್ರಹಿಸಿಕೊಂಡು ಯಾರು? ಯಾವಾಗ? ಎಲ್ಲಿ? ಪ್ರಶ್ನೆಗಳಿಗೆ ಉತ್ತರಿಸುವದು. | ಧ್ವನಿ ವ್ಯಾಪಾರ ಗುರುತಿಸುವ ಚಟುವಟಿಕೆಗಳು ಹಾಡು ಅಭಿನಯ. ಬಾಯ್ದೆರೆಯ ಕೆಲಸಗಳು. | ಪ್ರಕೃತಿ ಪ್ರಜ್ಞೆ ಹಾಗೂ ಪ್ರೀತಿ | ಅಭಿನಯಿಸಿ ಹಾಡನ್ನು ಹೇಳುವುದು ಮತ್ತು ಸಂವಹನ ಪದ್ಧತಿ | ೦೬ |
| ೫ | ಹಸ್ತ ರೇಖೆ ಬದಲಿಸಿದ ಬಾಲಕ | ಕಥೆ | **ಓದುವುದು** : ಸರಳ ಮತ್ತು ಪದ್ಯಗಳನ್ನು ಗಟ್ಟಿಯಾಗಿ ಓದುವದು ಮತ್ತು ಅರ್ಥೈಸುವದು.<br>ಬರಹ : ಗುಣಿತಾಕ್ಷರ ಮತ್ತು ಒತ್ತಕ್ಷರಗಳನ್ನು ನಕಲು ಮಾಡುವುದು ಪರಿಚಿತ ಸರಳ ವಾಕ್ಯಗಳನ್ನು ಬರೆಯಿರಿ. | ವಾಕ್ಯ ಪ್ರಯೋಗ. ಬಿಡಿಸಿ ಬರೆಯುವಿಕೆ. ಓದುವಿಕೆ. ಉತ್ತರಿಸುವಿಕೆ. ಪಾಠ ಅಥವಾ ಪ್ಯಾರಾ ಅರ್ಥೈಸುವಿಕೆ | ಛಲ, ಸಾಧನೆ | ಕಲಿನಲಿ ಬೋಧನೆ ವಿಧಾನ | ೦೮ |

| ಕ್ರ.ಸಂ. | ಪಾಠದ ಹೆಸರು | ಸಾಹಿತ್ಯ | ಪ್ರಮುಖ ಸಾಮರ್ಥ್ಯಗಳು | ಭಾಷಾ ಚಟುವಟಿಕೆಗಳು | ಮೌಲ್ಯಗಳು | ಬೋಧನಾ ವಿಧಾನ | ಅವಧಿ |
|---|---|---|---|---|---|---|---|
| ೬ | ಹಬ್ಬಗಳು | ಸಂವಾದ | **ಆಲಿಸುವಿಕೆ :** ಪಕ್ಷದಲ್ಲಿರುವ ಸರಳ ಪ್ರಶ್ನೆಗಳಿಗೆ ಉತ್ತರಿಸುವುದು ಬರಹ. ಉಕ್ತ ಲೇಖನಗಳ ಮೂಲಕ ಗುಣಿತಾಕ್ಷರ ಮತ್ತು ಸಂಯುಕ್ತಾಕ್ಷರಗಳನ್ನು ಪದಗಳನ್ನು ಬರೆಯಿರಿ. | ಸಂಭಾಷಣೆ ಚರ್ಚೆ ವೈಚಾರಿಕ ಪ್ರಜ್ಞೆಗೆ ಸಿದ್ಧಗೊಳಿಸುವಿಕೆ. | ಸಂಭಾಷಣೆ, ಚರ್ಚೆ | ಚತುರತೆಯಿಂದ ಕೇಳಿದ ಪ್ರಶ್ನೆಗಳಿಗೆ ಉತ್ತರಿಸುವುದು. ಧ್ವನಿ ಪೂರ್ಣವಾಗಿ ಓದುವ ಅಭ್ಯಾಸ. ಚಿಹ್ನೆಗಳ ಪರಿಚಯ ಚಟುವಟಿಕೆಗಳು | ೦೮ |
| ೭ | ಸವಿಯಾಗು ಸವಿಯಾಗು | ಕವಿತೆ | **ಮಾತುಗಾರಿಕೆ :** ಭಾವಾಭಿನಯ ಮೂಲಕ ಸರಳವಾಗಿ ಹಾಡುವದು. **ಓದು :** ಗಟ್ಟಿಯಾಗಿ ಓದುವುದು. ಸರಳ ಪ್ರಶ್ನೆಗಳಿಗೆ ಉತ್ತರಿಸುವುದು. | ಹಾಡುವುದು. ಉತ್ತರಿಸುವುದು. ಅಭಿನಯ ಹಾಗೂ ಧ್ವನಿ ಪೂರ್ಣ ಓದು. | ಮನುಷ್ಯ ಸವಿ ಸವಿಯಾಗಬೇಕು | ಅಭಿನಯ ವಿಧಾನ : ಹರ್ಬಾರ್ಟ ಪಂಚ ಸೋಪಾನಗಳು. ಅಭಿನಯಿಸಿ ಹಾಡುವುದು. | ೦೬ |

## ಗದ್ಯ ಪಾಠ – ೧

# ಸಾಹಸಿ ಮಹಿಳೆಯರು

### ೧. ಆರ್. ಕಲ್ಯಾಣಮ್ಮ





ಮಹಿಳೆಯರ ಮತ್ತು ಮಕ್ಕಳ ಏಳಿಗೆಗೆ ಮತ್ತೊಂದು ಹೆಸರು ಆರ್. ಕಲ್ಯಾಣಮ್ಮ. ಇವರು ಬೆಂಗಳೂರಿನವರು. ಇವರು ೧೮೯೪ರಲ್ಲಿ ಜನಿಸಿದರು. ತಾಯಿ ಜಾನಕಮ್ಮ; ತಂದೆ ರಾಮಸ್ವಾಮಿ ಅಯ್ಯಂಗಾರ. ಪ್ರಾಥಮಿಕ ಶಿಕ್ಷಣವನ್ನು ಬೆಂಗಳೂರಿನಲ್ಲಿ ಪಡೆದರು. ಓದುತ್ತಿರುವಾಗಲೇ ಮದುವೆಯಾಯಿತು. ಮೂರು ತಿಂಗಳೊಳಗೆ ಗಂಡನನ್ನು ಕಳೆದುಕೊಂಡರು.

ಸಂಸಾರದ ಸುಂದರ ಕನಸು ಪುಡಿ ಪುಡಿಯಾಯಿತು. ದಿಕ್ಕು ತೋರದಂತಾಯಿತು. ಭವಿಷ್ಯವೇ ಬಿದ್ದುಹೋಯಿತು. ಆದರೂ ಎದೆಗುಂದಲಿಲ್ಲ. ಮನೆಯಲ್ಲಿಯೇ ಓದಿದರು. ಎಲ್.ಎಸ್.ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಆ ಕಾಲದಲ್ಲಿ ಇದೊಂದು ಸಾಹಸವೇ ಆಗಿತ್ತು. ಓದುವ ಆಸೆ ಬಹಳವಾಗಿತ್ತು. ಆದರೆ ಅನಾನುಕೂಲತೆಯಿಂದ ಮುಂದೆ ಓದಲಾಗಲಿಲ್ಲ. ಆದರೂ ಮನೆಯಲ್ಲಿಯೇ ಓದು ಮುಂದುವರೆಸಿದರು. ಇದರಿಂದ ಅವರ ವಿಚಾರ ಶಕ್ತಿಗೆ ಹೊಸ ಹೊಳಪು ಬಂತು.

ಅಬಲೆಯರ ದೀನತೆ ಮತ್ತು ಮಕ್ಕಳ ಶೋಷಣೆಯ ಬಗೆಗೆ ಚಿಂತಿಸಿದರು. ಅಂತಹವರ ನೋವು-ಸಂಕಟಗಳನ್ನು ಪರಿಹರಿಸುವ ದಾರಿಯನ್ನು ಆರಿಸಿಕೊಂಡರು. ಅದಕ್ಕಾಗಿ

“ಶ್ರೀ ಶಾರದಾ ಸ್ತ್ರೀ ಸಮಾಜ”ವನ್ನು ಕಟ್ಟಿದರು. ವಿಶೇಷ ತರಬೇತಿ ಆರಂಭಿಸಿದರು. ಹಣಕಾಸಿನ ಸಬಲತೆ ತಂದು ಕೊಡಲು ದುಡಿದರು. ಬಾಲಕಿಯರಿಗೆ ಶಿಕ್ಷಣ ಕೊಡಲು ಶಾಲೆಗಳನ್ನು ಪ್ರಾರಂಭಿಸಿದರು.

ಹೆಣ್ಣು ಮಕ್ಕಳ ಸಮಸ್ಯೆಗಳನ್ನು ಚರ್ಚಿಸುವುದಕ್ಕೆ ‘ಸರಸ್ವತಿ ಪತ್ರಿಕೆ’ಯನ್ನು ಹುಟ್ಟು ಹಾಕಿದರು. ಈ ಪತ್ರಿಕೆಯ ಕೆಲಪುಟಗಳನ್ನು ಮಕ್ಕಳಿಗೂ ಮೀಸಲಾಗಿರಿಸಿದರು. ಮಕ್ಕಳಿಗಾಗಿ “ಅಖಿಲ ಕರ್ನಾಟಕ ಮಕ್ಕಳ ಕೂಟ’ ಕಟ್ಟಿದರು. ಸುತ್ತಮುತ್ತಲಿನ ಮಕ್ಕಳನ್ನು ಸೇರಿಸಿದರು. ಮಕ್ಕಳ ಆಶಯಕ್ಕೆ ತಕ್ಕಂತೆ ಕಥೆ ಕಟ್ಟಿದರು. ನಾಟಕ ರಚಿಸಿದರು. ಕುಣಿಸಿದರು. ಆಟವಾಡಿಸಿದರು. ಮಕ್ಕಳಿಗೆ ಹೊಸ ಲೋಕವನ್ನೇ ತೆರೆದರು. ಈ ಎಲ್ಲಾ ಕೆಲಸಗಳು ಅವರಿಗೆ ತೃಪ್ತಿ ತಂದವು.

ಅನಾರೋಗ್ಯದಿಂದ ಬಳಲುತ್ತಿದ್ದರೂ ಮಕ್ಕಳ ಸಮ್ಮೇಳನದಲ್ಲಿ ಭಾಗವಹಿಸಿದರು. ಮಹಿಳೆಯರ ಮತ್ತು ಮಕ್ಕಳ ಕಲ್ಯಾಣಕ್ಕಾಗಿ ತನ್ನ ಕಷ್ಟಕೋಟಲೆಗಳನ್ನು ಬದಿಗಿಟ್ಟು ದುಡಿದ ಹಿರಿಯ ಜೀವಿ. ೧೯೬೫ ರಲ್ಲಿ ಮರಣ ಹೊಂದಿದರು.



## ೨. ಸ್ವಾತಂತ್ರ್ಯ ಹೋರಾಟಗಾರ್ತಿ ಬಡಿಗೇರ ಸೀತಮ್ಮ



೧೯೪೭ ಆಗಸ್ಟ್ ೧೫, ಭಾರತಕ್ಕೆ ಸ್ವತಂತ್ರ ಸಿಕ್ಕ ದಿನ. ಅಂದು ತಿರಂಗಿ ಧ್ವಜವೇರಿಸಿ, "ವಂದೇ ಮಾತರಂ", "ಬೋಲೋ ಭಾರತ್ ಮಾತಾಕಿ ಜಯ್" ಎಂದು ಘೋಷಣೆ ಮಾಡುತ್ತ ಸಿಹಿ ಹಂಚಿದ ದಿನ. ಕೋಟಿ ಕೋಟಿ ಜನರ ಕನಸು ನನಸಾದ ದಿನ. ಆದರೆ ಭಾರತದೊಳಗಿನ ಹೈದ್ರಾಬಾದ ಸಂಸ್ಥಾನ ಮಾತ್ರ ಸ್ವತಂತ್ರವಾಗಿರಲಿಲ್ಲ. ಅದು ಭಾರತದಲ್ಲಿ ವಿಲೀನವಾಗಲಿಲ್ಲ. ಇಲ್ಲಿ ಭಾರತದ ತ್ರಿವರ್ಣ ಧ್ವಜವನ್ನು ನಿಷೇಧಿಸಲಾಗಿತ್ತು. ವಂದೇ ಮಾತರಂ ಗೀತೆ ದೇಶ ದ್ರೋಹದ ಹಾಡಾಯಿತು. ಮಹಾತ್ಮ ಗಾಂಧೀಜಿ, ವಲ್ಲಭಭಾಯಿ ಪಟೇಲ, ನೆಹರು, ಮೌಲಾನಾ ಅಬ್ದುಲ್ ಕಲಾಮ ಆಜಾದ ಮೊದಲಾದ ದೇಶಭಕ್ತರ ಭಾವಚಿತ್ರಗಳು ಬಹಿಷ್ಕಾರ ಹೊಂದಿದ್ದವು.

ಹೈದ್ರಾಬಾದ್ ಪ್ರಾಂತದ ಜನರು ನಿಜಾಮನ ವಿರುದ್ಧ ಸಿಡಿದೆದ್ದರು. ಆಗಿನ ಹೈದ್ರಾಬಾದ್ ಪ್ರಾಂತದಲ್ಲಿ ರಾಯಚೂರು ಜಿಲ್ಲೆಯೂ ಒಂದು. ಆ ಜಿಲ್ಲೆಯ ಕುಷ್ಟಗಿ ತಾಲೂಕಿನ ಮಾಲಗಿತ್ತಿ ಗ್ರಾಮದಲ್ಲಿ ಜನ ಸೇರಿದರು. ಸುತ್ತಮುತ್ತಲಿನ ಹಳ್ಳಿಗಳಿಂದ ಸಾವಿರಾರು ಜನರು ಬಂದರು. ಊರ ದೇವತೆ ಕೆಂಚವ್ವನ ಗುಡಿಯ ಬಯಲಿನಲ್ಲಿ ಧ್ವಜವೇರಿಸಲು ನಿರ್ಧರಿಸಿದರು. ಸಿದ್ಧತೆ ಮಾಡಲು ಪ್ರಾರಂಭಿಸಿದರು.

ಆಗ ಜನರ ಮಧ್ಯ ಇಪ್ಪತ್ತು ವರುಷದ ತರುಣಿ ಕುಣಿಯುತ್ತ ಬಂದಳು. ಎಡಗೈಯಲ್ಲಿ ಧ್ವಜ ಬಲಗೈಯಲ್ಲಿ ಕುಡಗೋಲು, ಅವಳು ಸಾಕ್ಷತ್ ಕಾಳಿಯಂತೆ ಕಾಣುತ್ತಿದ್ದಳು. ದುಂಡು ಮುಖ, ಹಣೆ ತುಂಬ ಕುಂಕುಮ, ಮೂಗಿನಲ್ಲಿ ನತ್ತು. ಕಚ್ಚೆ ಹಾಕಿದ ಇಲಕಲ್ಲ ಸೀರೆ, ಅವಳಲ್ಲಿ ಭಾವಾವೇಶ ತುಂಬಿತ್ತು. ಹಲಗೆ ಸಪ್ಪಳಕ್ಕೆ ರಣಭೈರವಿಯಂತೆ ಕುಣಿಯುತ್ತಿದ್ದಳು. ತಿರಂಗಿ ಧ್ವಜವನ್ನು ಅವಳೇ ಏರಿಸಿದಳು. ಜನ ಜೈ ಎಂದು ಘೋಷಿಸಿದರು. ಜೈ–ಹಿಂದ್ ಧ್ವನಿ ಎಲ್ಲೆಡೆ ಮೊಳಗಿತು.

ಆ ಧ್ವಜವೇರಿಸಿದ ತರುಣಿಯೇ ಬಡಿಗೇರ ಸೀತಮ್ಮ. ತಂದೆ ಬಸಪ್ಪ ತಾಯಿ ಶ್ಯಾವಂತ್ರೆವ್ವ. ಊರು ಮಾಲಗಿತ್ತಿ.

ಧ್ವಜವೇರಿಸುವ ಈ ಕಾರ್ಯಕ್ರಮ ತಡೆಯಲು ಬಂದ ಕೆಲವೇ ಪೋಲಿಸರು ಜನರನ್ನು ನೋಡಿ ದಂಗಾದರು. ಜನ ಜಂಗುಳಿಗೆ ಹೆದರಿ ಮೂಕಪ್ರೇಕ್ಷಕರಾದರು. ಮುಂದೆ ಈ ಹುಡುಗಿ ಸ್ವಾತಂತ್ರ ಹೋರಾಟದಲ್ಲಿ ಪಾಲ್ಗೊಂಡಳು. ನಿಜಾಮ ಸೈನಿಕರ ವಿರುದ್ಧ ಬಾಂಬು ಎಸೆದಳು. ೧೯೪೮ ಸೆಪ್ಟಂಬರ್ ೧೭ಕ್ಕೆ ಹೈದ್ರಾಬಾದ್ ಪ್ರಾಂತ ಭಾರತದಲ್ಲಿ ವಿಲೀನವಾಯಿತು. ಸ್ವಾತಂತ್ರ್ಯ ಸಿಕ್ಕಿತು. ೭೦ನೆಯ ವಯಸ್ಸಿನಲ್ಲಿ (೧೪.೦೧.೧೯೯೮) ಸ್ವಾತಂತ್ರ್ಯಜ್ಯೋತಿಯಲ್ಲಿ ವಿಲೀನವಾದಳು.

## ಗಮನಿಸಿ ಓದು :

ಏಳಿಗೆ–ಅಭಿವೃದ್ಧಿ, ಉನ್ನತಿ, ದೀನತೆ–ಬಡತನ, ಸಬಲ–ಶಕ್ತಿವಂತ. ಆಶಯ–ಆಸೆ, ಇಂಗಿತ, ಅನಾರೋಗ್ಯ–ರೋಗದಿಂದ ನರಳುವುದು. ಘೋಷಣೆ–ಗಟ್ಟಿಯಾದ ಕೂಗು , ವಿಲೀನ–ಐಕ್ಯವಾಗು, ಕಣ್ಮರೆಯಾಗು, ನಿಷೇಧ–ನಿರಾಕರಣೆ, ಬಹಿಷ್ಕಾರ–ಹೊರಕ್ಕೆ ಹಾಕು.

## ಗಮನಿಸಿ ತಿಳಿ :

ಪುಡಿಪುಡಿಯಾಗು– ಚೂರು ಚೂರಾಗು, ದಿಕ್ಕುತೋರದಂತಾಗು–ಏನು ಮಾಡಲು ತಿಳಿಯದಂತಾಗು, ತೋಚದಂತಾಗು, ಎಲ್.ಎಸ್– ಲೋಯರ್ ಸೆಕೆಂಡರಿ, ೭ನೆ ತರಗತಿ, ವಿಚಾರಶಕ್ತಿ– ಆಲೋಚನಾ ಶಕ್ತಿ, ಹುಟ್ಟುಹಾಕು– ಪ್ರಾರಂಭಿಸು, ಕಷ್ಟಕೋಟಲೆ–ಕಷ್ಟಗಳ ಸರಮಾಲೆ, ಸಂಸ್ಥಾನ– ದೇಶದ ಒಂದು ವಿಭಾಗ, ರಾಜ್ಯ, ಸಿಡಿದೇಳು– ರೊಚ್ಚಿಗೇಳು, ಕೋಪಗೊಳ್ಳುವುದು, ತಿರಂಗಿ– ಮೂರು ಬಣ್ಣ ಹೊಂದಿದ ನಮ್ಮ ರಾಷ್ಟ್ರಧ್ವಜ, ದಂಗಾಗು–ಆಶ್ಚರ್ಯಪಡು, ಭಾವಾವೇಶ–ಉದ್ರೇಕ, ಪಾಲ್ಗೊಳ್ಳು–ಭಾಗವಹಿಸು.



## ಅಭ್ಯಾಸ

### ೧. ಒಂದೇ ವಾಕ್ಯದಲ್ಲಿ ಉತ್ತರಿಸು.

ಅ) ಕಲ್ಯಾಣಮ್ಮ ಯಾರ ಬಗೆಗೆ ಚಿಂತಿಸಿದರು?

ಆ) ಕಲ್ಯಾಣಮ್ಮನವರ ವಿಚಾರಶಕ್ತಿಗೆ ಹೇಗೆ ಹೊಳಪು ಬಂದಿತು?

ಇ) ಸ್ವಾತಂತ್ರ್ಯ ಬಂದರೂ ಹೈದ್ರಾಬಾದ್ ಸಂಸ್ಥಾನ ಯಾರ ವಶದಲ್ಲಿತ್ತು ?

ಈ) ಮಾಲಗಿತ್ತಿ ಗ್ರಾಮದ ಜನರು ಎಲ್ಲಿ ಧ್ವಜವೇರಿಸಲು ನಿರ್ಧರಿಸಿದರು?

### ೨. ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿ.

ಅ) ಕಲ್ಯಾಣಮ್ಮ ಮಕ್ಕಳ ಕೂಟದಲ್ಲಿ ಮಾಡಿದುದೇನು ?

ಆ) ಧ್ವಜವೇರಿಸಲು ಬಂದ ಸೀತಮ್ಮನ ರೂಪವನ್ನು ವರ್ಣಿಸಿರಿ.

೩. ಹೊಂದಿಸಿ ಬರೆಯಿರಿ.

| ಅ | ಆ | |
|---|---|---|
| ಅ) ಅಖಿಲ ಕರ್ನಾಟಕ ಮಕ್ಕಳ ಕೂಟ | ೧) ಬಡಿಗೇರ ಸೀತಮ್ಮ | ____________ |
| ಆ) ತ್ರಿವರ್ಣ | ೨) ಸಂಸ್ಥಾನ | ____________ |
| ಇ) ಪೋಲಿಸರು | ೩) ಮೂರುಬಣ್ಣ | ____________ |
| ಈ) ರಣಭೈರವಿ | ೪) ಆರ್.ಕಲ್ಯಾಣಮ್ಮ | ____________ |
| ಉ) ಹೈದ್ರಾಬಾದ | ೫) ಮೂಕಪ್ರೇಕ್ಷಕರು | ____________ |
| | ೬) ಸರಸ್ವತಿ ಪತ್ರಿಕೆ | |

೪. ಮಾದರಿ ವಾಕ್ಯಗಳನ್ನು ಗಮನಿಸಿ. ಗೆರೆ ಹಾಕಿದ ಪದಗಳನ್ನು ಉಪಯೋಗಿಸಿಕೊಂಡು ನಿಮ್ಮ ಸ್ವಂತ ವಾಕ್ಯದಲ್ಲಿ ಬಳಸಿ.

ಅ) ಪ್ರವಾಹದಿಂದ ಜನ ಕಷ್ಟಕೋಟಲೆಗಳಿಗೆ ಒಳಗಾದರು.

________________________________________

ಆ) ನಾವು ಅನ್ಯಾಯದ ವಿರುದ್ಧ ಸಿಡಿದೇಳಬೇಕು.

________________________________________

ಇ) ಜೋಗ ಜಲಪಾತದ ಸೌಂದರ್ಯವನ್ನು ನೋಡಿ ದಂಗಾದೆನು.

________________________________________

ಈ) ಮೇಧಾ ಪಾಟ್ಕರರವರು ನರ್ಮದಾ ಬಚಾವೋ ಅಂದೋಲನವನ್ನು ಹುಟ್ಟು ಹಾಕಿದರು.

________________________________________

ಉ) ವಿವೇಕಾನಂದರ ಲೇಖನಗಳನ್ನು ಓದಿ ಸುಭಾಷರು ಭಾವಾವೇಶಕ್ಕೆ ಒಳಗಾದರು.

________________________________________

ಊ) ಕಲ್ಯಾಣಮ್ಮ ಮತ್ತು ಬಡಿಗೇರ ಸೀತಮ್ಮ ಅಬಲೆಯರಲ್ಲ ಸಬಲೆಯರು.

________________________________________

**೫. ಆವರಣದಲ್ಲಿ ಕೊಟ್ಟಿರುವ ಪದಗಳಲ್ಲಿ ಸರಿಯಾದ ಪದವನ್ನು ಆರಿಸಿ ಬಿಟ್ಟ ಸ್ಥಳವನ್ನು ತುಂಬಿರಿ.**

ಅ) ಭಾರತಕ್ಕೆ ಸ್ವಾತಂತ್ರ್ಯ ದೊರೆತರೂ ____________ ಸಂಸ್ಥಾನ ಮಾತ್ರ ಸ್ವತಂತ್ರವಾಗಲಿಲ್ಲ.
(ಹೈದ್ರಾಬಾದ್, ಸಿಕಂದರಾಬಾದ್, ಅಲಹಾಬಾದ, ಅಹಮದಾಬಾದ್)

ಆ) ಆರ್.ಕಲ್ಯಾಣಮ್ಮನವರು ____________ ಪರೀಕ್ಷೆಯಲ್ಲಿ ಉತ್ತೀರ್ಣರಾದರು.
( ಎಸ್.ಎಸ್.ಎಲ್.ಸಿ. ಎಲ್.ಎಸ್. ಪಿ.ಯು.ಸಿ. ಬಿ.ಎ)

ಇ) ಕಲ್ಯಾಣಮ್ಮನವರು ಹೆಣ್ಣುಮಕ್ಕಳ ಸಮಸ್ಯೆಯನ್ನು ಚರ್ಚಿಸುವುದಕ್ಕೆ ________ ಹುಟ್ಟು ಹಾಕಿದರು.
(ಶಾರದಾ ಪತ್ರಿಕೆ, ಸರಸ್ವತಿ ಪತ್ರಿಕೆ, ಮಕ್ಕಳ ಬಾವುಟ, ಮಕ್ಕಳ ಕೂಟ)

ಈ) ಬಡಿಗೇರ ಸೀತಮ್ಮನಲ್ಲಿ ____________ ತುಂಬಿತ್ತು.
(ಆವೇಶ, ವೀರಾವೇಶ, ಸಮಾವೇಶ, ಭಾವಾವೇಶ)

**೬. ಕೆಳಗಿನ ಮಾತುಗಳನ್ನು ಓದಿ ಕೇಳಿದ ಪ್ರಶ್ನೆಗಳಿಗೆ ಉತ್ತರಿಸಿ.**

ಅ) "ಸಂಸಾರದ ಸುಂದರ ಕನಸು ಪುಡಿ ಪುಡಿಯಾಯಿತು"
ಯಾರ ಕನಸು ಪುಡಿ ಪುಡಿಯಾಯಿತು ಏಕೆ?

ಆ) "ಅಂತಹವರ ನೋವು ಸಂಕಟಗಳನ್ನು ಪರಿಹರಿಸುವ ದಾರಿಯನ್ನು ಆರಿಸಿಕೊಂಡರು.
ಇಲ್ಲಿ ಅಂತಹವರು ಎಂದರೆ ಯಾರು ಯಾರು?

ಇ) 'ಅವಳು ಸಾಕ್ಷಾತ್ ಕಾಳಿಯಂತೆ ಕಾಣುತ್ತಿದ್ದಳು' ಕಾಳಿಯಂತೆ ಕಂಡವರು ಯಾರು? ಯಾವಾಗ?

ಈ) ಜನ ಒಕ್ಕೊರಲಿನಿಂದ ವಂದೇ ಮಾತರಂ ಎಂದು ಕೂಗಿದರು.
ಏಕೆ ಕೂಗಿದರು?

**೭. ಮಾದರಿಯಂತೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

**ಮಾದರಿ :** ಜಾಗ್ರತೆ x ಅಜಾಗ್ರತೆ

ಅನುಕೂಲ x ____________

ಅಬಲ x ____________

ಆರೋಗ್ಯ x ____________

ನೀತಿ x ____________

## ೮. ವಾಕ್ಯಗಳಲ್ಲಿ ಕಾಣುವ ಅರ್ಥ ವ್ಯತ್ಯಾಸವನ್ನು ತಿಳಿಯಿರಿ.

ಅ) ಬೆಕ್ಕು ಹಾಲು ಕುಡಿಯುತ್ತದೆ

ಆ) ಬೆಕ್ಕು ಹಾಲು ಕುಡಿಯಿತು

ಇ) ಬೆಕ್ಕು ಹಾಲು ಕುಡಿಯಬಹುದು.

ಇಂತಹ ಮೂರುವಾಕ್ಯಗಳನ್ನು ಮಾಡಿರಿ

.................................................................................................

.................................................................................................

.................................................................................................

## ೯ ಗಮನಿಸಿ ಓದಿರಿ.

ಅ) ಬಡವ –ಬಡತನ ಆ) ಸಿರಿ–ಸಿರಿತನ ಇ) ಜಾಣ –ಜಾಣತನ

ಈ) ಹಿರಿದು– ಹಿರಿಮೆ ಉ) ಗೌಡ– ಗೌಡಿಕೆ

## ೧೦. ಚಟುವಟಿಕೆ:

### ಇದನ್ನು ಓದಿ ಅರ್ಥೈಸಿಕೊಳ್ಳಿ.

“ಮದರ್‌ತೆರೆಸಾ” ಭಾರತದಲ್ಲಿ ಜೀವ ಸವೆಸಿದ ಮಹಾಜೀವ. ಈಕೆ ಕ್ರೈಸ್ತ ಸನ್ಯಾಸಿನಿ. ಇವರು ೧೯೧೦ ಅಗಸ್ಟ ೨೬ ರಂದು ಅಲ್ಬೆನಿಯಾದ ಸ್ಕೋಪ್ಸ ಪಟ್ಟಣದಲ್ಲಿ ಜನಿಸಿದರು.



ತೆರೆಸಾಳಿಗೆ ಭಾರತವೆಂದರೆ ಎಲ್ಲಿಲ್ಲದ ಪ್ರೀತಿ. ಇಲ್ಲಿನ ಸಂಸ್ಕೃತಿ, ಜೀವನ ಧರ್ಮ, ನಂಬಿಕೆಗಳಿಗೆ ಮಾರುಹೋಗಿ ಭಾರತಕ್ಕೆ ಬಂದಳು.

ಇವರು ಭಾರತಕ್ಕೆ ಬಂದು ಕಲ್ಕತ್ತೆಯ ಕೊಳೆಗೇರಿ ನಿವಾಸಿಗಳ ಸೇವೆ ಮಾಡಿದರು. ಅಲ್ಲಿ “ನಿರ್ಮಲ ಹೃದಯ” ಆಶ್ರಮ ಸ್ಥಾಪಿಸಿದರು. ಪ್ರತಿ ವರುಷ ಸಾವಿರಾರು ದೀನ ದಲಿತರಿಗೆ, ಅನಾಥರಿಗೆ, ಆಶ್ರಯ ನೀಡಿದರು. ಕುಷ್ಟರೋಗಿಗಳ ಸೇವೆಗೈದರು. ಕುಷ್ಟರೋಗಿಗಳಿಗಾಗಿ ‘ಗೋಬರ’ ಎಂಬ ಊರಲ್ಲಿ ಕುಷ್ಟರೋಗಿ ಭವನವನ್ನು ಸ್ಥಾಪಿಸಿದರು. ಈ ದೀನ ಬಂಧುವನ್ನು ತಾಯಿಯೆಂದು ಜನರು ಕರೆದು ಗೌರವಿಸಿದರು.

ಇವರಿಗೆ ೧೯೭೯ ರಲ್ಲಿ ನೋಬೆಲ್ ಪ್ರಶಸ್ತಿ ದೊರಕಿತು ಮತ್ತು ೧೯೮೦ರಲ್ಲಿ ಭಾರತಸರ್ಕಾರ “ಭಾರತ ರತ್ನ” ಪ್ರಶಸ್ತಿಯನ್ನು ನೀಡಿತು.



## ಗದ್ಯ ಪಾಠ – ೨

# ಧೀರಬಾಲಕ ನರೇಂದ್ರ





ಒಬ್ಬ ಬಾಲಕ ಕಣ್ಮುಚ್ಚಿ ಚಿಂತನೆ ಮಾಡುತ್ತಿದ್ದ. ಮೈ ಮೇಲೆ ಪರಿವಿರಲಿಲ್ಲ. ಅವನ ಮೇಲೆ ಹಾವೊಂದು ಹರಿದು ಹೋಯಿತು. ಅವನ ಗೆಳೆಯರು ನೋಡಿದರು. ಗಾಬರಿಯಾಗಿ ಓಡಿದರು. ತುಸು ಸಮಯದ ನಂತರ ಹುಡುಗರು ಓಡಿ ಬಂದರು. ಅವನನ್ನು ಮುಟ್ಟಿ ಎಚ್ಚರಿಸಿದರು. ಹಾವು ಹರಿದಾಡಿದ ವಿಷಯ ತಿಳಿಸಿದರು. ಹುಡುಗ ಭಯಪಡಲಿಲ್ಲ. 'ಪ್ರಾಣಿಗಳ ತಂಟೆಗೆ ಹೋಗದಿದ್ದರೆ ಅವು ನಮ್ಮನ್ನು ಏನು ಮಾಡುವುದಿಲ್ಲ' ಎಂದ.

ಈ ಹುಡುಗನ ಮನೆಯ ಬಳಿ ಒಂದು ದೊಡ್ಡ ತೋಟವಿತ್ತು. ಅಲ್ಲಿ ಮಾವಿನ ಮರವಿತ್ತು. ಅವನು ಮತ್ತು ಅವನ ಗೆಳೆಯರು ಆ ಮರವನ್ನು ಹತ್ತುತ್ತಿದ್ದರು. ಕೊಂಬೆಯಿಂದ ಕೊಂಬೆಗೆ ಹಾರುತ್ತಾ, ಕೂಗುತ್ತಾ ಆಟವಾಡುತ್ತಿದ್ದರು. ಇದರಿಂದ ಮಾಲಿಗೆ ಬೇಸರವಾಯಿತು. ಅವನು ಆ ಮರದಲ್ಲಿ ಭೂತ ಇದೆ. ನೀವು ಈಗಲೇ ಜಾಗ ಬಿಟ್ಟು ಹೋಗಿ, ಇಲ್ಲದಿದ್ದರೆ ನಿಮ್ಮನ್ನೆಲ್ಲ ನುಂಗಿಬಿಡುತ್ತದೆ ಎಂದನು. ಈ ಮಾತನ್ನು ಕೇಳಿದ ಬಾಲಕರು ಹೆದರಿ ಓಡಿಹೋದರು. ಈ ಹುಡುಗ ಮಾತ್ರ ಅಲ್ಲಿಯೇ ಇದ್ದ. ಭಯದ ಬದಲು ಭೂತದ ಬಗ್ಗೆ ಅವನಿಗೆ ಕುತೂಹಲ. ಕೊಂಬೆಯಿಂದ ಕೊಂಬೆಗೆ ತೂಗಾಡುತ್ತಾ ಭೂತವನ್ನು ಎದುರಿಸಲು ಸಿದ್ಧನಾದನು. ಭೂತ ಬರಲೇ ಇಲ್ಲ. ಕಾದು ಕಾದು ನಿರಾಶನಾದ. ಇದು ಹುಡುಗರನ್ನು ಓಡಿಸಲು ಉಪಾಯ ಎಂದು ಅರಿತನು. ಕೂಡಲೇ ಗೆಳೆಯರನ್ನು ಕರೆದನು. ಇಂತಹ ಭಯದ ಮಾತುಗಳನ್ನು ನಂಬಬಾರದೆಂದು ತಿಳಿ ಹೇಳಿದನು. ಇವನಾರು ಗೊತ್ತೆ ? ಇವನೇ "ನರೇಂದ್ರ".

ಇವರು ದೊಡ್ಡವರಾದ ಮೇಲೆ ರಾಮಕೃಷ್ಣ ಪರಮಹಂಸರ ಶಿಷ್ಯರಾದರು. ಸ್ವಾಮಿ ವಿವೇಕಾನಂದ ಎಂದು ಅವರು ಹೆಸರಿಸಿದರು. ಇವರೊಮ್ಮೆ ಅಮೇರಿಕೆಗೆ ಹೋಗಿದ್ದರು. ಅಲ್ಲಿ ಡಾಯರ್‌ಸನ್ ಎಂಬುವವರ ಮನೆಯಲ್ಲಿ ಅತಿಥಿಯಾಗಿ ಉಳಿದುಕೊಂಡರು. ಅವರ ಮನೆಯಲ್ಲಿ ಪುಸ್ತಕ ಓದುತ್ತಾ ಕುಳಿತಾಗ ಡಾಯರ್‌ಸನ್ ಬಂದರು. ವಿವೇಕಾನಂದರು ಓದಿನ ಗುಂಗಿನಲ್ಲಿ ಇವರನ್ನು ಗಮನಿಸಲಿಲ್ಲ. ಮುಂದೆ ವಿವೇಕಾನಂದರು ಅವರೊಡನೆ ಮಾತನಾಡಲು ಆರಂಭಿಸಿದರು. ಪುಸ್ತಕದ ನೂರಾರು ಸಾಲುಗಳನ್ನು ಅದರಂತೆ ಉದಾಹರಿಸುತ್ತಿದ್ದರು. ಇದನ್ನು ಕಂಡು ಡಾಯರ್‌ಸನ್ ಬೆರಗಾದರು. ಇದು ಹೇಗೆ ಸಾಧ್ಯ? ಎಂದರು. ಇದೆಲ್ಲ ಓದುವಾಗಿನ ಏಕಾಗ್ರತೆಯಿಂದ ಸಾಧ್ಯ. ಆ ಸಮಯದಲ್ಲಿ ಉರಿಯುವ ಕೆಂಡವನ್ನು ನನ್ನ ಮೇಲೆ ಇಟ್ಟರೂ ಗೊತ್ತಾಗುವುದಿಲ್ಲ ಎಂದರು.

ಭಾರತಕ್ಕೆ ಬಂದಮೇಲೆ ಇವರು ದೇಶದ ತುಂಬ ಸುತ್ತಿದರು. ಜನರ ಕಷ್ಟ ಅರಿತರು. "ಏಳಿ ಎದ್ದೇಳಿ! ಎಚ್ಚರಗೊಳ್ಳಿರಿ! ಗುರಿ ಮುಟ್ಟುವವರೆಗೆ ನಿಲ್ಲದಿರಿ" "ಶಕ್ತಿಯೇ ಜೀವನ; ದೌರ್ಬಲ್ಯವೇ ಮರಣ" ಎಂದು ಕರೆ ನೀಡಿದರು.

## ಓದಿ –ತಿಳಿ :

ಚಿಂತನೆ–ಯೋಚನೆ, ಧ್ಯಾನ, ಪರಿವೆ–ಅರಿವು, ತಂಟೆ–ಗೋಜು, ಉಪದ್ರವ, ಮಾಲಿ–ತೋಟ ಕಾಯುವವನು, ಸಿದ್ಧ–ಸಮರ್ಥ, ಉಪಾಯ–ಯುಕ್ತಿ, ಗಮನಿಸು–ಲಕ್ಷಿಸು, ಬೆರಗು–ಆಶ್ಚರ್ಯಪಡು, ಏಕಾಗ್ರತೆ–ತದೇಕ ಚಿತ್ತ, ಚಿತ್ತ ಚಂಚಲತೆ ಇರದ ಸ್ಥಿತಿ., ಕೆಂಡ–ಉರಿಯುತ್ತಿರುವ ಇದ್ದಿಲು, ಗೌರವ–ಮರ್ಯಾದೆ, ಅರಿ–ತಿಳಿ, ದೌರ್ಬಲ್ಯ–ಬಲಹೀನವಾದ, ಮರಣ–ಸಾವು.



## ಗಮನಿಸಿ– ತಿಳಿ.

ಕುತೂಹಲ–ತವಕ, ತಿಳಿದುಕೊಳ್ಳುವ ಆಸಕ್ತಿ. ಗುಂಗು–ತಲ್ಲೀನತೆ, ಅದರಲ್ಲಿಯೇ ಮುಳುಗುವಿಕೆ.

## ಅಭ್ಯಾಸ

### ೧. ಒಂದು ವಾಕ್ಯದಲ್ಲಿ ಉತ್ತರಿಸಿ.

ಅ) ಯಾರು ಚಿಂತನೆ ಮಾಡುತ್ತಿದ್ದರು?

ಆ) ಬಾಲಕ ನರೇಂದ್ರನ ಮೇಲೆ ಏನು ಹರಿದು ಹೋಯಿತು?

ಇ) ನರೇಂದ್ರ ತೋಟದಲ್ಲಿ ಯಾರಿಗಾಗಿ ಕಾದನು?

ಈ) ರಾಮಕೃಷ್ಣ ಪರಮಹಂಸರು ನರೇಂದ್ರನನ್ನು ಯಾವ ಹೆಸರಿನಿಂದ ಕರೆದರು?

ಉ) ಸ್ವಾಮಿ ವಿವೇಕಾನಂದರು ಜನರಿಗೆ ಕೊಟ್ಟ ಸಂದೇಶವೇನು?

## ೨. ಎರಡು ವಾಕ್ಯದಲ್ಲಿ ಉತ್ತರಿಸಿ.

ಅ) ನರೇಂದ್ರನ ಗೆಳೆಯರು ಏಕೆ ಓಡಿ ಹೋದರು?

ಆ) ಮಕ್ಕಳು ಮಾವಿನ ಮರಹತ್ತಿ ಏನು ಮಾಡುತ್ತಿದ್ದರು?

ಇ) ತೋಟದ ಮಾಲಿ ಮಕ್ಕಳಿಗೆ ಏನೆಂದು ಹೇಳಿದನು?

ಈ) ಡಾಯರ್‌ಸನ್‌ನು ಏಕೆ ಬೆರಗಾದನು?

ಉ) ಸ್ವಾಮಿ ವಿವೇಕಾನಂದರು ಡಾಯರ್‌ಸನ್‌ಗೆ ಏನೆಂದು ಉತ್ತರಿಸಿದರು?

ಊ) ಸ್ವಾಮಿ ವಿವೇಕಾನಂದರು ಜನರ ಕಷ್ಟ ಹೇಗೆ ಅರಿತರು?

## ೩. ಕೆಳಗಿನ ವಾಕ್ಯಗಳನ್ನು ಯಾರು ? ಯಾರಿಗೆ ? ಹೇಳಿದರು.

ಅ) "ಪ್ರಾಣಿಗಳ ತಂಟೆಗೆ ಹೋಗದಿದ್ದರೆ ಅವು ನಮ್ಮನ್ನು ಏನು ಮಾಡುವುದಿಲ್ಲ"

ಆ) "ಭಯದ ಮಾತುಗಳನ್ನು ನಂಬಬಾರದು".

ಇ) "ಇದು ಹೇಗೆ ಸಾಧ್ಯ".

ಈ) "ಶಕ್ತಿಯೇ ಜೀವನ; ದೌರ್ಬಲ್ಯವೇ ಮರಣ".



## ೪. ಹೊಂದಿಸಿ ಬರೆಯಿರಿ.

| ಅ | ಆ | |
|---|---|---|
| ಅ) ನರೇಂದ್ರ | ೧) ಗುರು | ........................ |
| ಆ) ರಾಮಕೃಷ್ಣ ಪರಮಹಂಸ | ೨) ವಿವೇಕಾನಂದ | ........................ |
| ಇ) ಮರದ | ೩) ತವಕ | ........................ |
| ಈ) ಕುತೂಹಲ | ೪) ಟೊಂಗೆ | ........................ |

## ೫. ಸ್ವಂತವಾಕ್ಯದಲ್ಲಿ ಬಳಸಿ.

ಅ) ಸಿದ್ಧನಾಗು : ........................................................................

ಆ) ಓಡಿಹೋಗು : ........................................................................

ಇ) ಕಣ್ಮುಚ್ಚಿ : ...........................................................................

ಈ) ಕುತೂಹಲ : ...........................................................................

ಉ) ಉಪಾಯ : ...........................................................................

## ೬. ಸರಿಯಾದ ಪದವನ್ನು ಆಯ್ಕೆ ಮಾಡಿ ತುಂಬಿರಿ.

ಅ) ಅವನ ಮೈ ಮೇಲೆ ........................ ಹರಿದು ಹೋಯಿತು

೧) ಹಾವು ೨) ಚೇಳು ೩) ಝರಿ ೪) ಇಲಿ

ಆ) ಭಯದ ಬದಲು ಭೂತದ ಬಗ್ಗೆ ಅವನಿಗೆ ........................

೧) ಅಂಜಿಕೆ ೨) ಕುತೂಹಲ ೩) ಗೌರವ ೪) ಭಯ

ಇ) ಇಂತಹ ........................ ಮಾತುಗಳನ್ನು ನಂಬಬಾರದು.

೧) ಪ್ರೀತಿಯ ೨) ನಂಬಿಕೆಯ ೩) ಭಯದ ೪) ಉತ್ಸಾಹದ

ಈ) ಉರಿವ ಕೆಂಡವನ್ನು ನನ್ನ ಮೇಲಿಟ್ಟರೂ ಗೊತ್ತಾಗುವುದಿಲ್ಲ ಎಂದವರು ..................

೧) ಲೇಖಕ ೨) ಸ್ವಾಮಿ ವಿವೇಕಾನಂದ

೩) ಡಾಯರ್‌ಸನ್ ೪) ಯಾರು ಅಲ್ಲ

ಉ) ಗುರಿ ಮುಟ್ಟುವವರೆಗೆ ........................

೧) ಮಾತನಾಡದಿರಿ ೨) ಕುಣಿಯದಿರಿ ೩) ಓಡದಿರಿ ೪) ನಿಲ್ಲದಿರಿ.

## ೭. ಈ ಪ್ರಶ್ನೆಗಳಿಗೆ ವಿಚಾರ ಮಾಡಿ ಉತ್ತರಿಸಿರಿ.

ಅ) ಪ್ರಾಣಿಗಳ ಬಗ್ಗೆ ನರೇಂದ್ರನ ಅಭಿಪ್ರಾಯವೇನು?

...........................................................................................

ಆ) ಭೂತದ ಬಗೆಗೆ ಅವನ ವಿಚಾರಗಳೇನು?

...........................................................................................

ಇ) ಏಕಾಗ್ರತೆ ಎಂದರೇನು?

...........................................................................................

**೮. ಈ ಪದಗಳಿಗೆ ವಿರುದ್ಧಾರ್ಥಕ ಪದ ಬರೆ.**

**ಮಾದರಿ :– ಭಯ x ಅಭಯ**

ಅ) ಗೆಳೆಯ x ..........................   ಆ) ಜನನ x ..........................

ಇ) ಕೀರ್ತಿ x ..........................   ಈ) ಆಸೆ x ..........................

**೯. ಬಿಡಿಸಿ ಬರೆಯಿರಿ.**

**ಮಾದರಿ : ಕಣ್ಮುಚ್ಚಿ = ಕಣ್ಣು + ಮುಚ್ಚಿ**

ಅ) ಹಾವೊಂದು = ..........................

ಆ) ನರೇಂದ್ರ = ..........................

ಇ) ಏಕಾಗ್ರತೆ = ..........................

ಈ) ಹೀಗೆಂದರು = ..........................

**೧೦. ಈ ಕವಿತೆ ಓದಿ – ಪ್ರಶ್ನೆಗಳಿಗೆ ಉತ್ತರಿಸಿರಿ.**

**ಸ್ವಾಮಿ ವಿವೇಕಾನಂದ**

ಭುವನೇಶ್ವರಿ ಕರುಣೆಯ ಕಂದ
ವಿಶ್ವನಾಥದತ್ತರ ಪುತ್ರನು ಅಂದ
ಪರಮಹಂಸರ ಶಿಷ್ಯನು ನರೇಂದ್ರ
ಭಾರತ ಮಾತೆಗೆ ಕೀರುತಿ ತಂದ
ಚಿಕಾಗೋ ಸಭೆಯಲ್ಲಿ ಭಾಗವಹಿಸಿದ
ಸರ್ವಧರ್ಮಗಳ ಸಮನ್ವಯ ಸಾರಿದ
ಮಾನವೀಯ ಪ್ರೀತಿಯ ಎತ್ತಿ ಹಿಡಿದ
ಲೋಕಕ್ಕೆ ಬೆಳಕಾದ ಹೆಮ್ಮೆಯ ಕಂದ
ಏಳಿರಿ, ಎದ್ದೇಳಿರಿ ಎಂದು ಧ್ವನಿಸಿದ
ಯುವ ಜನಾಂಗಕ್ಕೆ ಸ್ಫೂರ್ತಿ ತುಂಬಿದ
ನವಭಾರತ ಕಟ್ಟಲು ಕಹಳೆ ಊದಿದ
ಭಾರತಾಂಬೆಯ ವೀರ ವಿವೇಕಾನಂದ

**– ಎಂ.ಜೆ. ದೇಶಪಾಂಡೆ**

**ಮೇಲೆ ಪದ್ಯ ಓದಿ ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.**

ಅ. ನರೇಂದ್ರರ ತಂದೆ-ತಾಯಿಯ ಹೆಸರೇನು?

..........................................................................................

ಆ. ಚಿಕಾಗೋ ಸರ್ವಧರ್ಮ ಸಮ್ಮೇಳನದಲ್ಲಿ ಏನನ್ನು ಸಾರಿದರು?

..........................................................................................

ಇ. ಲೋಕಕ್ಕೆ ಬೆಳಕಾದ ಹೆಮ್ಮೆಯ ಕಂದ ಯಾರು?.

..........................................................................................

ಈ. ಸ್ವಾಮಿ ವಿವೇಕಾನಂದರ ಸಂದೇಶವೇನು?

..........................................................................................

**೧೧. ಇದನ್ನು ಓದಿ ಗ್ರಹಿಸಿ.**

ಶಿಷ್ಯನೊಬ್ಬ ತನಗೊದಗಿದ ತೊಂದರೆಗಳನ್ನು ತೋಡಿಕೊಂಡಾಗ ಸ್ವಾಮೀಜಿ ಗುಡುಗಿದರು. ಇದೇನು ಅವಿವೇಕದ ಮಾತನಾಡುತ್ತಿರುವುದು ನೀನು! ನಿನ್ನೊಳಗೆ ಅದಮ್ಯ ಶಕ್ತಿ ಅಡಗಿದೆ. ಆದರೆ, 'ನಾನೇನೂ ಅಲ್ಲ; ನನ್ನಿಂದೇನೂ ಆಗುವುದಿಲ್ಲ' ಎಂದು ನೀನು ಶಕ್ತಿಹೀನನಂತಾಗಿರುವೆ. ನಿನಗೆ ನೀನೇ ಸಹಾಯ ಮಾಡಿಕೊಳ್ಳದಿದ್ದರೆ ನೀನು ಬದುಕಲಿಕ್ಕೆ ಅನರ್ಹ.

ಎದ್ದೇಳು, ನಿರ್ಭೀತನಾಗು! ಬಲಾಢ್ಯನಾಗು!
ಎಲ್ಲ ಹೊಣೆಗಾರಿಕೆಯನ್ನೂ ನಿನ್ನ ಹೆಗಲಮೇಲೆಯೇ ಹೊತ್ತುಕೊ.
ನಿನ್ನ ಭವಿಷ್ಯದ ನಿರ್ಮಾಪಕ ನೀನೇ ಎಂಬುದನ್ನು ತಿಳಿದಿರು.
ನಿನಗೆ ಅಗತ್ಯವಿರುವ ಎಲ್ಲ ಶಕ್ತಿ-ಸಾಮರ್ಥ್ಯಗಳೂ
ನಿನ್ನೊಳಗೇ ಇವೆ ! ಎಂದು ತಿಳಿ ಹೇಳಿದರು.



**೧೨. ಇದನ್ನು ಗಟ್ಟಿಯಾಗಿ ಓದಿ ಹೇಳಿರಿ.**

**ವಿವೇಕವಾಣಿ :** "ಶಕ್ತಿಯೇ ಜೀವನದ ಒಳಗುಟ್ಟು.
ದುರ್ಬಲತೆ, ಚಿಂತೆ ದುಃಖಗಳ ಮೂಲ".

**ಬಲಿಷ್ಠರಾಗಿ :** "ಕಬ್ಬಿಣದ ಮಾಂಸಖಂಡ, ಉಕ್ಕಿನ ನರ ಮಂಡಲ,
ವಿದ್ಯುತ್ತಿನ ಇಚ್ಛಾಶಕ್ತಿಯ ಬಲ, ಇವುಗಳನ್ನು ಬೆಳೆಸಿಕೊಂಡು
ನಿಮ್ಮ ಕಾಲ ಮೇಲೆ ನಿಲ್ಲಿ."



## ಪದ್ಯ ಪಾಠ – ೩

# ಅಮ್ಮ





ನಿನ್ನ ನುಡಿಯ ಜೇನಿನಲಿ
ಎದೆಯ ಒಲುಮೆಯ ಸಿರಿಯಲಿ
ಮುದ್ದೆ ಮಾಡಿ ಅನುರಾಗದಿ ನೀಡಿ
ಜೋಗುಳ ಹಾಡುವೆ ಲಾಲಿಯಲಿ ॥೧ ॥

ಮನೆಯ ಮೊದಲ ಪಾಠಶಾಲೆಯಲಿ
ಗುಟುಕಿಟ್ಟು ನಭಕೆ ಹಾರಲು ಕಲಿಸಿ
ತಪ್ಪು–ನೆಪ್ಪುಗಳ ಮರೆತು ಕರುಣೆಯಲಿ
ಊಟೆಯಂದದಿ ನೆಗೆನೆಗೆದು ಬರುವೆ ಅರಸಿ॥೨॥

ಮಹಾತ್ಮನಿರಲಿ ಮಂಕನಿರಲಿ
ಜಗದೊಡೆಯನಾಗಲೆಂದು ಹರಸುವ ಮಾತೆ
ಗುರಿ ಮರೆತ ಬಾಳಿಗೆ ನೀ ದಿಕ್ಸೂಚಿ
ನೀ ಬರಿ ಅಮ್ಮಳಲ್ಲ, ನಡೆದಾಡುವ ದೇವತೆ ॥ ೩॥

– ಜಂಬಣ್ಣ ಅಮರಚಿಂತ

## ಕವಿ –ಪರಿಚಯ : ಜಂಬಣ್ಣ ಅಮರಚಿಂತ



ಕವಿ ಜಂಬಣ್ಣ ಅಮರಚಿಂತ ಅವರು ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನ ಅಂಕುಶದೊಡ್ಡಿಯವರು. ಇವರು ಪ್ರಗತಿ ಪರ ಚಿಂತನಶೀಲ ಬರಹಗಾರರು. 'ಮುಂಜಾವಿನ ಕೊರಳು' ಇವರ ಮೊದಲ ಕವನ ಸಂಕಲನ. 'ಅಧೋ ಜಗತ್ತಿನ ಅಕಾವ್ಯ' 'ಮಣ್ಣಲ್ಲಿ ಬಂದ ಅಕ್ಷರ' ಹರಿಯುವ ನದಿಗೆ ಮೈಯಲ್ಲ ಕಾಲು' ಮುಂತಾದವು ಇವರು ಕವನ ಸಂಕಲನಗಳು. ಗಜಲ್ ಮತ್ತು ರೂಬಾಯಿ ಸಂಕಲನಗಳು ಹೊರಬಂದಿವೆ.

ಇವರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿವೆ.

ಇವರ 'ಅಮ್ಮ' ಪದ್ಯವನ್ನು 'ಸುದ್ದಿಮೂಲ' ದಿನಪತ್ರಿಕೆಯಿಂದ ಆಯ್ದುಕೊಳ್ಳಲಾಗಿದೆ. ಮಾನವನ ಜೀವನದಲ್ಲಿ ತಾಯಿ ಕೇವಲ ಅಮ್ಮನಲ್ಲ. ಆಕೆ ದೇವತೆ. ಚಿಕ್ಕ ಮಗುವನ್ನು ಪ್ರೀತಿಯಿಂದ ಮುತ್ತು ನೀಡಿ ಉಣಿಸಿ, ಜೋಗುಳ ಹಾಡಿ, ತನ್ನ ಮಗು ಜಾಣನಿರಲಿ ಅಥವಾ ದಡ್ಡನಿರಲಿ; ಅವನಿಗೆ ಒಳ್ಳೆಯದಾಗಲೆಂದು ಹಾರೈಸುವಳು. ಅಷ್ಟೇ ಅಲ್ಲ. ಜೀವನದ ಗುರಿಯ ಕಡೆಗೆ ಕರೆದೊಯ್ಯುವ ದಿಕ್ಸೂಚಿಯಂತೆ ಇರುವಳು. ಇಂತಹ ತಾಯಿಯನ್ನು ಬರಿ ಅಮ್ಮ ಅಲ್ಲ. ನಡೆದಾಡುವ ದೇವತೆ ಎಂದಿದ್ದಾರೆ ಕವಿಗಳು.



### ಓದಿ–ತಿಳಿ

ನುಡಿ–ಮಾತು, ಒಲುಮೆ –ಪ್ರೀತಿ, ಒಲವು, ಸಿರಿ–ಸಂಪತ್ತು, ಅನುರಾಗ– ಪ್ರೀತಿ,ಪ್ರೇಮ, ವಾತ್ಸಲ್ಯ, ಗುಟುಕು– ಒಂದು ಸಲ ಕುಡಿಯುವಷ್ಟು, ತುತ್ತು, ನಭ– ಆಕಾಶ, ಆಗಸ, ಊಟೆ – ನೀರಿನ ಚಿಲುಮೆ, ನೀರಿನ ಬುಗ್ಗೆ, ನೆಗೆ – ಹಾರು, ಜಿಗಿ, ಅರಸಿ– ಹುಡುಕಿ, ಹರಸು– ಆಶೀರ್ವದಿಸು, ಮಾತೆ –ತಾಯಿ , ಅಮ್ಮ.

### ಗಮನಿಸಿ– ತಿಳಿ

ತಪ್ಪುನೆಪ್ಪು–ತಪ್ಪು ಒಪ್ಪುಗಳು, ಜಗದೊಡೆಯ–ಜಗತ್ತಿಗೆ ಒಡೆಯ, ಪರಮಾತ್ಮ, ದಿಕ್ಸೂಚಿ–ಸಮುದ್ರದಲ್ಲಿ ಯಾನ ಮಾಡುವ ನಾವಿಕರಿಗೆ ದಿಕ್ಕನ್ನು ತಿಳಿಸುವ ಯಂತ್ರ.

### ಅಭ್ಯಾಸ

**೧. ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.**

ಅ) ಯಾರ ನುಡಿಯಲ್ಲಿ ಜೇನಿದೆ?

ಆ) ಅಮ್ಮ ಅನುರಾಗದಿಂದ ಏನನ್ನು ನೀಡುವಳು?

ಇ) ಮಗುವಿಗೆ ಮೊದಲ ಪಾಠಶಾಲೆ ಯಾವುದು?

ಈ) ಅಮ್ಮ ಕರುಣೆಯಿಂದ ಯಾವುದನ್ನು ಮರೆಯುವಳು?

ಉ) ಯಾವುದರಂತೆ ತಾಯಿ ನೆಗೆ ನೆಗೆದು ಬರುವಳು ?

ಊ) ಅಮ್ಮನ ಹರಕೆ ತಿಳಿಸಿ.

ಋ) ಅಮ್ಮ ಯಾವುದಕ್ಕೆ ದಿಕ್ಸೂಚಿಯಾಗುವಳು?

ಎ) ಕವಿ ಅಮ್ಮನನ್ನು ಏನೆಂದು ಕರೆದಿದ್ದಾನೆ?

## ೨. ಹೊಂದಿಸಿ ಬರೆಯಿರಿ.

| ಅ | | ಆ | |
|---|---|---|---|
| ಅ) | ಒಲುಮೆಯ | ೧) ನೆಗೆ ನೆಗೆದು | ................................. |
| ಆ) | ನಭಕೆ | ೨) ದೇವತೆ | ................................. |
| ಇ) | ಊಟೆಯಂದದಿ | ೩) ಸಿರಿಯಲಿ | ................................. |
| ಈ) | ಮಹಾತ್ಮನಿರಲಿ | ೪) ಹಾರಲು ಕಲಿಸಿ | ................................. |
| ಉ) | ನಡೆದಾಡುವ | ೫) ಮಂಕನಿರಲಿ | ................................. |

## ೩. ಈ ಸಾಲುಗಳ ಅರ್ಥ ಹೇಳಿರಿ.

ಅ) ಊಟೆಯಂದದಿ ನೆಗೆ ನೆಗೆದು ಬರುವೆ.

ಆ) ಮಹಾತ್ಮನಿರಲಿ ಮಂಕನಿರಲಿ
ಜಗದೊಡೆಯನಾಗಲೆಂದು ಹರಸುವ ಮಾತೆ

ಇ) ಗುರಿ ಮರೆತ ಬಾಳಿಗೆ ನೀ ದಿಕ್ಸೂಚಿ

## ೪. ಈ ಶಬ್ದಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಉಪಯೋಗಿಸಿರಿ.

ಅನುರಾಗ : ..........................................................................................

ನಭ : ..........................................................................................

ಗುಟುಕಿಡು : ..........................................................................................

ಮಹಾತ್ಮ : ..........................................................................................

ದಿಕ್ಸೂಚಿ : ..........................................................................................

೫. ಕೆಳಗೆ ಕೊಟ್ಟಿರುವ ನಾಲ್ಕು ಉತ್ತರಗಳಲ್ಲಿ ಸರಿಯಾದುದನ್ನು ಆರಿಸಿ ಬಿಟ್ಟ ಸ್ಥಳ ತುಂಬಿರಿ.

ಅ) ಅಮ್ಮನ ನುಡಿಯಲಿ ..................................

೧) ಸವಿಯಿದೆ ೨) ಜೇನಿದೆ ೩) ಸಕ್ಕರೆಯಿದೆ ೪) ಬೆಲ್ಲವಿದೆ

ಆ) .................................. ಮಾಡಿ ಅನುರಾಗದಿ ನೀಡುವಳು.

೧) ರೊಟ್ಟಿ ೨) ಅನ್ನ ೩) ಮುದ್ದೆ ೪) ತುತ್ತು

ಇ) .................................. ಯೇ ಮೊದಲ ಪಾಠಶಾಲೆ.

೧) ಗುಡಿ ೨) ದವಾಖಾನೆ ೩) ಅಂಗನವಾಡಿ ೪) ಮನೆ

ಈ) ತಪ್ಪು-ನೆಪ್ಪುಗಳು ಮರೆತು ಕರುಣೆಯಲಿ .................................. ನೆಗೆ ನೆಗೆದು ಬರುವೆ.

೧) ಊಟೆಯಂದದಿ ೨) ಪ್ರೀತಿಯಂದದಿ

೩) ಪ್ರೇಮದಂದದಿ ೪) ಶಾಂತಿಯಂದದಿ

ಉ) ಗುರಿ ಮರೆತ ಬಾಳಿಗೆ ತಾಯಿಯು ..................................

೧) ಗಡಿಯಾರ ೨) ಅಯಸ್ಕಾಂತ

೩) ಗಾಳಿಕೋಳಿ ೪) ದಿಕ್ಸೂಚಿ

೬. ಮೂರು-ನಾಲ್ಕು ಸಾಲಿನಲ್ಲಿ ಉತ್ತರಿಸಿರಿ.

ಅ) ತಾಯಿ ಮಗುವಿಗೆ ಊಟಮಾಡಿಸುವ ರೀತಿ ಹೇಳಿ.

..................................................................................................

..................................................................................................

..................................................................................................

ಆ) ತಾಯಿ ಹರಸುವ ಪರಿಯನ್ನು ಕವಿಯ ಮಾತಿನಲ್ಲಿ ಹೇಳಿ.

..................................................................................................

..................................................................................................

..................................................................................................

## ೭. ಈ ಜೋಡು ನುಡಿಗಳನ್ನು ಗಮನಿಸಿ ವಾಕ್ಯದ ಮುಖಾಂತರ ಅರ್ಥ ತಿಳಿಯಿರಿ.

ಅ) **ತಪ್ಪು ನೆಪ್ಪು** : ನನ್ನ ತಪ್ಪು ನೆಪ್ಪುಗಳನ್ನು ಅಮ್ಮ ಕ್ಷಮಿಸುವಳು.

ಆ) **ಅಡೆತಡೆ** : ಅಡೆತಡೆ ಬಂದರೂ ಓದು ಮುಂದುವರೆಸುವೆನು.

ಇ) **ಸುಳ್ಳು ಪೊಳ್ಳು** : ನಾನು ಸುಳ್ಳು ಪೊಳ್ಳು ಹೇಳುವುದಿಲ್ಲ.

ಈ) **ಹಾಲು ಜೇನು** : ಬದುಕು ಹಾಲು ಜೇನಿನಂತೆ ಇರಬೇಕು.

## ೮. ಕಥೆ ಓದಿ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.

ಒಬ್ಬ ವಿಧವೆ. ಸಣ್ಣ ತರಕಾರಿ ಅಂಗಡಿ. ಅದರಿಂದಲೇ ಆಕೆಯ ಜೀವನ ಸಾಗುತ್ತಿತ್ತು. ಅವಳಿಗೆ ಒಬ್ಬನೇ ಮಗ. ಅವನನ್ನು ಓದಿಸಬೇಕೆಂಬ ಹಂಬಲ. ದೊಡ್ಡ ಶಾಲೆಗೆ ಸೇರಿಸಿದ್ದಳು. ಅವನ ಸಹಪಾಠಿಗಳು ಶ್ರೀಮಂತರ ಮಕ್ಕಳು. ತಾಯಿ ಮಗನ ವಿದ್ಯಾಭ್ಯಾಸದ ಬಗ್ಗೆ ತಿಳಿಯಲು ಶಾಲೆಗೆ ಬಂದಳು. ಹರಕಲು ಸೀರೆ , ಬಡಕಲು ಶರೀರದ ಆಕೆಯನ್ನು ನೋಡಿದ ಸಹಪಾಠಿಗಳು ಗೇಲಿ ಮಾಡಿದರು. ಇದರಿಂದ ಅವನಿಗೆ ಅವಮಾನವಾದಂತಾಯಿತು. ಸಾಯಂಕಾಲ ಮನೆಗೆ ಬಂದು ತಾಯಿಯನ್ನು ತರಾಟೆಗೆ ತೆಗೆದುಕೊಂಡನು. ಇನ್ನೊಮ್ಮೆ ಶಾಲೆಯ ಹತ್ತಿರ ಬಾರದಂತೆ ತಾಕೀತು ಮಾಡಿದ.



ದಿನಗಳು ಉರುಳಿದವು. ಮಗ ದೊಡ್ಡವನಾದನು. ಚೆನ್ನಾಗಿ ಓದಿದ. ಹೊರದೇಶಕ್ಕೆ ಹೋದ. ತಾಯಿಯನ್ನು ಮರೆತೇ ಬಿಟ್ಟನು. ಅವನು ಭಾರತಕ್ಕೆ ಬಂದಾಗ ತಾಯಿಯ ಮನೆ ನೆನಪಾಯಿತು. ಊರಿಗೆ ಬಂದ . ತಾಯಿ ಸತ್ತ ಸುದ್ದಿ ತಿಳಿಯಿತು. ಮರುಗಿದ. ಸಾಯುವ ಮುನ್ನ ಒಂದು ಪತ್ರ ಬರೆಸಿ ಮಗ ಬಂದರೆ ಕೊಡಲು ಮನೆಯ ಮಾಲೀಕನಿಗೆ ತಿಳಿಸಿದ್ದಳು. ಅದನ್ನು ಬಿಡಿಸಿ ನೋಡಿದಾಗ ' ಮಗು ನೀನು ಚಿಕ್ಕವನಿದ್ದಾಗ ನಡೆದ ಅಪಘಾತದಲ್ಲಿ ಒಂದು ಕಣ್ಣನ್ನು ಕಳೆದುಕೊಂಡಿದ್ದೆ. ಎಲ್ಲರೂ ನಿನ್ನನ್ನು 'ಕುರುಡ' ಎಂದು ಕರೆಯಬಾರದೆಂದು ವೈದ್ಯರಲ್ಲಿಗೆ ಹೋದೆನು. ನನ್ನ ಕಣ್ಣನ್ನು ತೆಗೆದು ನಿನಗೆ ಹಾಕಲು ಹೇಳಿದೆ, ಅವರು ಆಗುವುದಿಲ್ಲ ಎಂದರು. ಆಗ ಸತ್ತ ನಂತರ ದಾನ ಮಾಡಿದ್ದ ಬೇರೊಬ್ಬರ ಕಣ್ಣನ್ನು ನಿನಗೆ ಕಸಿ ಮಾಡಿದರು. ಚಿಕಿತ್ಸೆಗೆ ಕೊಡಬೇಕಾದ ಹಣಕ್ಕಾಗಿ ನಾನು ಕೊನೆ ಉಸಿರು ಇರುವವರೆಗೆ ದುಡಿದು ತೀರಿಸಿದ್ದೇನೆ. ನೀನು ಎಲ್ಲಿಯೇ ಇರು ಚೆನ್ನಾಗಿರು. ಇದೆ ನನ್ನ ಹರಕೆ ಪತ್ರ.

ಇದನ್ನು ಓದಿ ಅವನ ಕಣ್ಣಲ್ಲಿ ನೀರು ಬಂದಿತು. ಇಂತಹ ತಾಯಿಯನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ. ಎಂದು ದುಃಖಿಸಿದನು.

## ೧. ಈ ಪ್ರಶ್ನೆಗಳಿಗೆ ಉತ್ತರಿಸಿ.

ಅ) ತಾಯಿಯ ಹಂಬಲ ಏನಾಗಿತ್ತು ?

_______________

ಆ) ಅಮ್ಮ ಶಾಲೆಗೆ  ಏಕೆ ಹೋದಳು?

_______________

ಇ) ಸಹಪಾಠಿಗಳು ಏಕೆ ಗೇಲಿ ಮಾಡಿದರು ?

_______________

ಈ) ಪತ್ರದಲ್ಲಿ ಏನೆಂದು ಬರೆದಿತ್ತು ?

_______________

## ೨. ನಿಮ್ಮ ತಾಯಿಯ ಬಗೆಗೆ ನಾಲ್ಕು ಸಾಲು ಬರೆಯಿರಿ.

_______________

_______________

_______________

_______________

_______________

_______________





## ಗದ್ಯ ಪಾಠ – ೪

# ಜಲಮಾಲಿನ್ಯ

(**ಹಿನ್ನೆಲೆ :** ಶಾಲಾ ಮೈದಾನದಲ್ಲಿ ಮಕ್ಕಳು ಗುಂಪು ಗುಂಪಾಗಿ ಚರ್ಚಿಸುತ್ತಿದ್ದಾರೆ. ಮೊನ್ನೆ ತುಂಗಾನದಿ ತೀರದ ಹೊರಸಂಚಾರಕ್ಕೆ ಹೋದಾಗ ಸುಮ ನದಿಯಲ್ಲಿ ಸ್ನಾನ ಮಾಡಿದಳು. ಆ ಕಾರಣದಿಂದ ಅವಳ ಮೈಮೇಲೆ ಗುಳ್ಳೆಗಳು ಎದ್ದಿವೆ. ಅವಳು ಜ್ವರದಿಂದ ಮಲಗಿದ್ದಾಳೆ. ಅವಳನ್ನು ನೋಡಿಕೊಂಡು ಬರಲು ಆಸ್ಪತ್ರೆಗೆ ಹೋಗುವ ನಿರ್ಧಾರ ಮಾಡಿದ್ದಾರೆ. ರವಿವಾರ ಬೆಳಿಗ್ಗೆ ೧೦ ಗಂಟೆಗೆ ಆಸ್ಪತ್ರೆಗೆ ಹೊರಡಲು ನಿರ್ಧರಿಸಿದರು.)

### ಆಸ್ಪತ್ರೆಯ ದೃಶ್ಯ : ೧

(ಸುಮ ಮಂಚದ ಮೇಲೆ ಮಲಗಿದ್ದಾಳೆ. ಮುಖ, ಮೈಮೇಲೆ ಗುಳ್ಳೆಗಳು ಎದ್ದಿವೆ. ಅವಳನ್ನು ವೈದ್ಯರು ಪರೀಕ್ಷಿಸುತ್ತಿದ್ದಾರೆ. ಅವಳ ತಾಯಿ ಬಾಡಿದ ಮುಖದಿಂದ ಮಕ್ಕಳನ್ನು ಕರೆದು ತೋರಿಸಿದರು. ಮಕ್ಕಳು ಸುಮಳನ್ನು ನೋಡಿ ಗಾಬರಿಯಾಗುವರು. ಮೈ ಕೆಂಡದಂತೆ ಸುಡುತ್ತಿತ್ತು.)

**ರೀಟಾ** : ವೈದ್ಯರೆ, ಸುಮಳ ಮೈ ಮೇಲೆ ಗುಳ್ಳೆಗಳು ಎದ್ದಿವೆ. ಇನ್ನೂ ಜ್ವರ ಇಳಿದಿಲ್ಲ ಅಲ್ಲವೇ?

**ವೈದ್ಯರು** : ಹೌದು, ಸೋಂಕು ತಗಲಿರುವುದರಿಂದ ಅವಳಿಗೆ ಮೈಮೇಲೆ ಗುಳ್ಳೆಗಳು ಬಂದಿವೆ. ಇನ್ನೂ ಜ್ವರ ಇಳಿದಿಲ್ಲ.

**ಶಾಂತಾ** : ಈ ರೀತಿ ಸೋಂಕು ತಗಲಲು ಕಾರಣವೇನು?





ವೈದ್ಯರು : (ಅಲ್ಲೇ ಇದ್ದ ಕೆಲವು ಚಿತ್ರಪಟಗಳನ್ನು ತೋರಿಸುತ್ತಾ)
ಇಲ್ಲಿ ನೋಡಿ ಮಕ್ಕಳೇ, ಈ ಚಿತ್ರದಲ್ಲಿ ನದಿಯ ದಂಡೆಯ ಬಳಿಯೇ ಒಂದು ರಾಸಾಯನಿಕ ಕಾರ್ಖಾನೆ ಇದೆ. ಅದರ ತ್ಯಾಜ್ಯ ನೀರಿನಲ್ಲಿ ಹಾನಿಕಾರಕ ರಾಸಾಯನಿಕಗಳಿವೆ. ಅವನ್ನು ನದಿಗೆ ಬಿಡುತ್ತಿರುವುದರಿಂದ ನೀರು ಮಲಿನವಾಗುತ್ತಿದೆ. ಇಂತಹ ಹಲವಾರು ಕಾರಣಗಳಿಂದ ಮಲಿನವಾಗುವುದನ್ನು "ಜಲಮಾಲಿನ್ಯ" ಎನ್ನುತ್ತಾರೆ. ಇಂತಹ ಮಲಿನವಾದ ನೀರನ್ನು ಕುಡಿಯುವ ಜನರಿಗೆ, ಪ್ರಾಣಿಗಳಿಗೆ ಹಲವಾರು ಕಾಯಿಲೆಗಳು ಬರುತ್ತವೆ. ಅಲ್ಲದೆ ಲಕ್ಷಾಂತರ ಜಲಚರಗಳು ಸಾಯುತ್ತವೆ.

ರಾಜು : ಕಾರ್ಖಾನೆಗಳಿರುವ ಕಡೆ ಮತ್ತು ನಗರ ಪ್ರದೇಶದಲ್ಲಿ ನೀರು ಹೆಚ್ಚು ಮಲಿನವಾಗುತ್ತದೆ. ಅಲ್ಲವೇ ? ಸರ್

ವೈದ್ಯರು : ಕೇವಲ ನಗರ ಪ್ರದೇಶಗಳಲ್ಲಿ ಮಾತ್ರ ನೀರು ಮಲಿನವಾಗುತ್ತಿಲ್ಲ. ರಾಜು, ಹಳ್ಳಿಗಳಲ್ಲಿಯೂ ನೀರು ಮಲಿನವಾಗುತ್ತಿದೆ.

ಪುಟ್ಟಿ : ಅದು ಹೇಗೆ ಸರ್?

ವೈದ್ಯರು : ಹಳ್ಳಿಗಳಲ್ಲಿ ಜನರು ದನಕರುಗಳನ್ನು ಕೆರೆಗಳಲ್ಲಿ ತೊಳೆಯುತ್ತಾರೆ. ಅಲ್ಲದೆ ರೈತರು ತಮ್ಮ ಬೆಳೆಗಳಿಗೆ ಸಿಂಪಡಿಸುವ ರಾಸಾಯನಿಕ ವಸ್ತುಗಳಿಂದಲೂ ನೀರು ಕಲುಷಿತಗೊಳ್ಳುತ್ತಿದೆ. ಈ ಕೊಳೆಯಾದ ನೀರಿನಿಂದ ಚರ್ಮದ ಮೇಲೆ ಗುಳ್ಳೆಗಳು ಮೂಡುತ್ತವೆ.

ಪುಟ್ಟಿ : ಇದನ್ನು ನಿಲ್ಲಿಸಲು ಏನು ಮಾಡಬೇಕು?

ವೈದ್ಯರು : ಮೊದಲು ನಾವು ನಮ್ಮ ಮಟ್ಟಿಗೆ ಸ್ವಚ್ಛತೆ ಕಾಯ್ದುಕೊಳ್ಳಬೇಕು, ತಿಳುವಳಿಕೆ ನೀಡಬೇಕು, ಪತ್ರಿಕೆಗಳ ಮೂಲಕ ಪ್ರಚಾರ ಮಾಡಬೇಕು ಹಾಗೂ ಜನಪ್ರತಿನಿಧಿಗಳ ಗಮನಕ್ಕೆ ತರಬೇಕು. ಸರಕಾರದ ಮೇಲೆ ಒತ್ತಡ ಹೇರಬೇಕು.

## ಶಾಲಾ ಬಯಲಿನ ದೃಶ್ಯ – ೨

(ಶಾಲೆಯ ಊಟದ ವಿರಾಮದ ಸಮಯ. ಆಗ ಮಕ್ಕಳೆಲ್ಲರೂ ಊಟ ಮಾಡಿ ಹರಟೆ ಹೊಡೆಯುತ್ತಿದ್ದಾರೆ)

ರಾಜು : ಪುಟ್ಟಿ , ಸುಮ ನಾಲ್ಕು ದಿನದಿಂದ ಶಾಲೆಗೆ ಬರಲಿಲ್ಲ. ಈಗ ಅವಳು ಹೇಗಿರುವಳು?

ಪುಟ್ಟಿ : ರಾಜೂ, ಅವಳು ಇನ್ನೂ ಆಸ್ಪತ್ರೆಯಲ್ಲೇ ಇದ್ದಾಳೆ.

ರಜನಿ : ಏನಾಗಿದೆ ಅವಳಿಗೆ?

**ಪುಟ್ಟಿ** : ನದಿಯ ಕಲುಷಿತ ನೀರಿನಲ್ಲಿ ಸ್ನಾನ ಮಾಡಿದ್ದರಿಂದ ಅವಳಿಗೆ ಚರ್ಮದ ಮೇಲೆ ಗುಳ್ಳೆಗಳು ಬಂದಿವೆ.

**ನಿಖಿಲ** : ಹಾಗಾದರೆ ನದಿಯ ನೀರು ಕಲುಷಿತಗೊಂಡಿರಬೇಕು.

**ಶಾಂತಾ** : ಹೌದು, ಹೌದು, ಕಲುಷಿತ ನೀರು ನದಿಗೆ ಬಿಡಬಾರದೆಂದು ಜನಪ್ರತಿನಿಧಿಗಳಿಗೆ ಪತ್ರಿಕೆ ಮುಖಾಂತರ ಹೇಳಿದರೂ, ಜನಪ್ರತಿನಿಧಿಗಳಿಗೆ ತಿಳಿಸಿದರೂ ಏನೂ ಪ್ರಯೋಜನವಾಗಿಲ್ಲ.

**ಆಕಾಶ** : ಹಾಗಾದರೆ ಈಗ ಏನು ಮಾಡೋಣ ?

**ಶ್ಯಾಂ** : ನಾವೆಲ್ಲರೂ ನಮ್ಮ ಸ್ನೇಹಿತರೊಡಗೂಡಿ ನಾಳೆಯಿಂದ ಆ ಕಾರ್ಖಾನೆ ಎದುರು ಅಥವಾ ಗಾಂಧಿ ಮೂರ್ತಿ ಮುಂದೆ ಸತ್ಯಾಗ್ರಹ ಮಾಡೋಣ ಅಧಿಕಾರಿಗಳನ್ನು ಎಚ್ಚರಮಾಡೋಣ.

## ದೃಶ್ಯ – ೩






ಶಾಲೆಯ ಮಕ್ಕಳು ಗಾಂಧಿ ಪ್ರತಿಮೆ ಬಳಿ ಸತ್ಯಾಗ್ರಹ ಪ್ರಾರಂಭಿಸಿದರು. ಮಕ್ಕಳ ಹೋರಾಟವನ್ನು ಪತ್ರಿಕೆಗಳು, ಮಾಧ್ಯಮಗಳು ಪ್ರಕಟಿಸಿದವು. ಮಕ್ಕಳು ಮಾಡಿದ ಸತ್ಯಾಗ್ರಹಕ್ಕೆ ಅಧಿಕಾರಿಗಳು ಎಚ್ಚೆತ್ತರು. ಕಲುಷಿತಗೊಂಡ ನೀರು ನದಿಗಳಿಗೆ ಸೇರದಂತೆ ಮಾಡಿದರು. ತ್ಯಾಜ್ಯ ನೀರನ್ನು ಸ್ವಚ್ಛಮಾಡಿ ಭೂಮಿಯಲ್ಲಿ ಇಂಗಿಸುವ ಯೋಜನೆಯನ್ನು ಪ್ರಾರಂಭಿಸಿದರು. ನದಿಗೆ ಕಲುಷಿತ ನೀರು ಸೇರುವುದು ತಪ್ಪಿತು.

## ಓದಿ – ತಿಳಿ

ನಿಶ್ಶಬ್ದ–ಸದ್ದಿಲ್ಲದಿರುವುದು, ಮೌನ, ಕಲುಷಿತ–ಗಲೀಜು, ಮಲಿನ, ದಂಡೆ–ದಡ, ಕಾರ್ಖಾನೆ– ಕೈಗಾರಿಕೆ, ಜಲಚರ–ನೀರಿನಲ್ಲಿ ವಾಸಿಸುವ ಜೀವಿ, ಕುಂಟೆ–ನೀರು ನಿಲ್ಲುವ ಹಳ್ಳ, ಆಸಕ್ತಿ –ಶ್ರದ್ಧೆ.

## ಓದಿ –ಗಮನಿಸಿ

ಮಾರಣಾಂತಿಕ–ಸಾವು ತರುವ, ಅಂಗವಿಕಲತೆ–ಅಂಗಗಳ ಊನತೆ
ಮಾಧ್ಯಮಗಳು– ಕಂಪ್ಯೂಟರ್, ಪತ್ರಿಕೆ, ಟಿ.ವಿ. ಇತ್ಯಾದಿಗಳು.

## ಅಭ್ಯಾಸ

**೧. ಒಂದು ವಾಕ್ಯದಲ್ಲಿ ಉತ್ತರಿಸಿ.**

ಅ) ಸುಮ ಏಕೆ ಶಾಲೆಗೆ ಬಂದಿರಲಿಲ್ಲ?

..............................................................................................

ಆ) ಸುಮಳನ್ನು ನೋಡಲು ಯಾರು ಯಾರು ಹೋದರು?

..............................................................................................

ಇ) ಸುಮಳಿಗೆ ಎಂಥ ಜ್ವರ ಬಂದಿತ್ತು?

..............................................................................................

ಈ) ಜಲ ಮಾಲಿನ್ಯ ಎಂದರೇನು?

..............................................................................................

ಉ) ಮಕ್ಕಳ ಸತ್ಯಾಗ್ರಹಕ್ಕೆ ಯಾರು ಎಚ್ಚೆತ್ತರು?

..............................................................................................

ಊ) ಮಕ್ಕಳೆಲ್ಲಾ ಗಾಂಧಿ ಮೂರ್ತಿ ಬಳಿ ಏಕೆ ಸೇರಿದರು?

..............................................................................................

**೨. ಎರಡು – ಮೂರು ವಾಕ್ಯಗಳಲ್ಲಿ ಉತ್ತರಿಸಿ.**

ಅ) ನೀರು ಕಲುಷಿತವಾಗಲು ಕಾರಣಗಳೇನು?

..............................................................................................

..............................................................................................

ಆ) ಕಲುಷಿತ ನೀರಿನಿಂದಾಗುವ ಪರಿಣಾಮಗಳೇನು?

.......................................................................................................

.......................................................................................................

ಇ) ನೀರು ಮಲಿನವಾಗುವುದನ್ನು ನಿಲ್ಲಿಸುವ ಮೂರು ಉಪಾಯ ಹೇಳಿರಿ?

.......................................................................................................

.......................................................................................................

ಈ) ಮಕ್ಕಳ ಸತ್ಯಾಗ್ರಹ ಬೀರಿದ ಪರಿಣಾಮವೇನು?

.......................................................................................................

.......................................................................................................

## ೩. ಯಾರು ಯಾರಿಗೆ ಹೇಳಿದರು ?

ಅ) "ಇನ್ನೂ ಜ್ವರ ಇಳಿದಿಲ್ಲ . ಅಲ್ಲವೇ?"

.......................................................................................................

ಆ) "ಲಕ್ಷಾಂತರ ಜಲಚರಗಳು ಸಾಯುತ್ತವೆ."

.......................................................................................................

ಇ) "ಮೊದಲು ನಾವು ನಮ್ಮ ಮಟ್ಟಿಗೆ ಸ್ವಚ್ಛತೆ ಕಾಯ್ದುಕೊಳ್ಳಬೇಕು."

.......................................................................................................

ಈ) "ಅಧಿಕಾರಿಗಳನ್ನು ಎಚ್ಚರ ಮಾಡೋಣ."

.......................................................................................................

## ೪. ಬಿಟ್ಟ ಸ್ಥಳ ತುಂಬಿರಿ.

ಅ) ತ್ಯಾಜ್ಯ ನೀರಿನಲ್ಲಿ ............................ ರಾಸಾಯನಿಕಗಳಿವೆ.

ಆ) ದನಕರುಗಳನ್ನು ............................ ತೊಳೆಯುತ್ತಾರೆ.

ಇ) ಕಲುಷಿತ ನದಿಯ ನೀರಿನಲ್ಲಿ .............................. ಅವಳಿಗೆ ಚರ್ಮದ ಮೇಲೆ .............................. ಬಂದಿವೆ.

ಈ) ತ್ಯಾಜ್ಯ ನೀರನ್ನು .............................. ಭೂಮಿಯಲ್ಲಿ .............................. ಯೋಜನೆಯನ್ನು ಪ್ರಾರಂಭಿಸಿದರು.

**೫. ಈ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆಯಿರಿ.**

ಅ) ಆಸಕ್ತಿ : ..............................................................................................

ಆ) ಸಂತೋಷ : ..............................................................................................

ಇ) ಧನ್ಯವಾದ : ..............................................................................................

ಈ) ದಯಮಾಡಿ: ..............................................................................................

ಉ) ತೊಂದರೆ : ..............................................................................................

**೬. ಈ ಪ್ರಶ್ನೆಗಳಿಗೆ ಎರಡು ಮೂರು ಸಾಲಿನಲ್ಲಿ ಉತ್ತರಿಸಿರಿ.**



ಅ) ಸಾರ್ವಜನಿಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಯಾರ ಯಾರ ಗಮನಕ್ಕೆ ತರಬೇಕು?

..............................................................................................

..............................................................................................

ಆ) ಮಕ್ಕಳು ಕಾರ್ಖಾನೆಯ ಮಾಲಿಕರಿಗೆ ಬುದ್ಧಿಕಲಿಸಲು ಏನು ಮಾಡಿದರು?

..............................................................................................

..............................................................................................

**೭. ನಿಮ್ಮೂರಲ್ಲಿ ಕೆರೆ ಅಥವಾ ಹೊಳೆಯ ನೀರು ಮಲಿನವಾಗುವ ಕಾರಣಗಳನ್ನು ಚರ್ಚಿಸಿ ಅದನ್ನು ತಪ್ಪಿಸಲು ನೀವು ಮಾಡುವ ಉಪಾಯವೇನು ? ತಿಳಿಸಿರಿ.**

..............................................................................................

..............................................................................................

..............................................................................................

೮.	ಈ ಕೆಳಕಂಡ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

ಅ) ನಿಶ್ಯಬ್ದ X ..........................................

ಆ) ಸಂತೋಷ X ..........................................

ಇ) ಶುದ್ಧ X ..........................................

ಈ) ಆಸಕ್ತಿ X ..........................................

ಉ) ಆರೋಗ್ಯ X ..........................................

೯.	ಕೆಳಕಂಡ ಗದ್ಯಭಾಗಕ್ಕೆ ಲೇಖನ ಚಿಹ್ನೆಗಳನ್ನು ಹಾಕಿರಿ.

ವೈದ್ಯರೆ ಸುಮಾಳ ಮೈಮೇಲೆ ಗುಳ್ಳೆಗಳು ಎದ್ದಿವೆ ಇನ್ನೂ ಜ್ವರ ಇಳಿದಿಲ್ಲ ಅಲ್ಲವೆ



೧೦.	ಈ ಪದಗಳನ್ನು ೫ ಸಲ ಬರೆಯಿರಿ.

| ಮಾಲಿನ್ಯ | ಚರ್ಚೆ | ಸ್ನಾನ | ಆಸ್ಪತ್ರೆ | ವೈದ್ಯರು |
|---|---|---|---|---|
| ................ | ................ | ................ | ................ | ................ |
| ................ | ................ | ................ | ................ | ................ |
| ................ | ................ | ................ | ................ | ................ |
| ................ | ................ | ................ | ................ | ................ |
| ................ | ................ | ................ | ................ | ................ |

೧೧.	ಮಕ್ಕಳ ಸತ್ಯಾಗ್ರಹ ಬೀರಿದ ಪರಿಣಾಮವೇನು ?

..........................................................................................................

..........................................................................................................

..........................................................................................................

..........................................................................................................

೧೨. ನಿಮ್ಮ ಊರಿಗೆ "ರಕ್ಷಿತ ಕುಡಿವ ನೀರು" ಪೂರೈಸಲು ಕೋರಿ ತಾಲೂಕು ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕರಿಗೆ ಪತ್ರ ಬರೆಯಿರಿ.

**ಇಂದ**

ರಮೇಶ<br>
ವಿದ್ಯಾನಗರ<br>
ಬೆಂಗಳೂರು

ಗೆ,

..................................................

..................................................

..................................................

**ಮಾನ್ಯರೆ,**

**ವಿಷಯ :** ರಕ್ಷಿತ ಕುಡಿವ ನೀರು ಪೂರೈಸಲು ಕೋರಿ



..........................................................................................................................

..........................................................................................................................

..........................................................................................................................

..........................................................................................................................

ವಂದನೆಗಳೊಂದಿಗೆ

ತಮ್ಮ ವಿಶ್ವಾಸಿ

...............................

(ಸಹಿ)

ಹೆಸರು (                    )

ದಿನಾಂಕ :

ಸ್ಥಳ :



# ಗದ್ಯ ಪಾಠ – ೫

## ಇದೊಂದು ಸತ್ಯಕಥೆ



(**ಹಿನ್ನಲೆ:** ೧೯೪೭ ಆಗಸ್ಟ್ ೧೫ರಂದು ಭಾರತ ಸ್ವತಂತ್ರವಾಯಿತು. ಆದರೆ ಹೈದ್ರಾಬಾದ್‌ಪ್ರಾಂತ ಸ್ವತಂತ್ರವಾಗಲಿಲ್ಲ. ನಿಜಾಮನು ತನ್ನದು ಸ್ವತಂತ್ರರಾಜ್ಯವೆಂದು ಸಾರಿದನು. ಆಗ ಹೈದ್ರಾಬಾದ್‌ಪ್ರಾಂತದ ಜನರು ಸ್ವಾತಂತ್ರ್ಯಕ್ಕಾಗಿ ಹೋರಾಟ ಪ್ರಾರಂಭಿಸಿದರು. ಗಡಿಭಾಗಗಳಲ್ಲಿ ಶಿಬಿರ ಕಟ್ಟಿಕೊಂಡು ಅಸಹಕಾರ ಆಂದೋಲನ ಕೈಗೊಂಡರು. ಸನ್ಯಾಸಿಯೂ ತಪಸ್ವಿಯೂ ಆದ ಮುರಡಿ ಭೀಮಜ್ಜನವರು ಸ್ವಾತಂತ್ರ್ಯ ಪ್ರೇಮಿಗಳು. ಅವರು ಗಡಿಭಾಗದಲ್ಲಿದ್ದು ಗಜೇಂದ್ರಗಡ ಶಿಬಿರದ ಮಾರ್ಗದರ್ಶಿಗಳು ಆಗಿದ್ದರು. ೧೯೪೮ ಜನವರಿಯಲ್ಲಿ ನಡೆದ ಸತ್ಯ ಘಟನೆಯಿದು. ಆಗ ಪುಂಡಲೀಕಪ್ಪ ಜ್ಞಾನಮೋತೆ ಗಜೇಂದ್ರಗಡ ಶಿಬಿರಾಧಿಪತಿಗಳಾಗಿದ್ದರು.)



ಸರಿರಾತ್ರಿ, ಸುತ್ತಲು ಕತ್ತಲು. ಎಲ್ಲ ಕಡೆಗೂ ಮೌನ. ಆಗ ಎತ್ತಿನ ಗಂಟೆಗಳ ಕಿಲಿಕಿಲಿ ನಿನಾದ ಮತ್ತೆ ಬಂಡಿಯ ಸಪ್ಪಳ. ಆ ಬಂಡಿಯಲ್ಲಿ ವೇಷಮರೆಸಿಕೊಂಡ ಬಿ.ವಿ.ದೇಸಾಯಿ ಹಾಗೂ ಪುಂಡಲೀಕಪ್ಪ ಜ್ಞಾನಮೋತೆಯವರು ಇದ್ದರು. ಅವರು ಸ್ವಾತಂತ್ರ್ಯ ಹೋರಾಟಗಾರರು. ನಿಜಾಮ ಸರ್ಕಾರ ಅವರಿಬ್ಬರನ್ನು ಜೀವ ಸಹಿತ ಹಿಡಿದು ಕೊಟ್ಟವರಿಗೆ ಇಲ್ಲವೆ ತಲೆತಂದವರಿಗೆ ಬಹುಮಾನ ಸಾರಿತ್ತು. ಅವರು ನಿಜಾಮ ಪೋಲಿಸರ ಕಣ್ಣುತಪ್ಪಿಸಿ ಗಜೇಂದ್ರಗಡ ಶಿಬಿರಕ್ಕೆ ಗುನ್ನಾಳದಿಂದ ಹೊರಟಿದ್ದರು. ತರಲಕಟ್ಟಿ ಮಾರ್ಗದ ಮಧ್ಯದಲ್ಲಿ ನಿಜಾಮ ಪೋಲಿಸರಿಬ್ಬರು ಇವರ ಬಂಡಿಯನ್ನು ತಡೆದರು. ಇವರಿಬ್ಬರಿಗೂ ಭಯ ಆವರಿಸಿತು. ಆದರೂ ಪಾರಾಗುವ ಹಂಚಿಕೆಹೂಡಿದರು.

ಯಾರು ನೀವು? ಇಷ್ಟು ರಾತ್ರಿಯಲ್ಲಿ ಎಲ್ಲಿಗೆ ಹೊರಟಿರುವಿರಿ? ಎಂದು ಪೊಲೀಸರು ಕೇಳಿದರು. ನಾವು ಮಾಟಲದಿನ್ನಿಯವರು. ನಮ್ಮಣ್ಣನಿಗೆ ಜ್ವರ ಬಂದಿದೆ. ಗಜೇಂದ್ರಗಡ ವೈದ್ಯರಲ್ಲಿಗೆ ಹೊರಟಿರುವೆವು ಎಂದು ಬಂಡಿ ಹೊಡೆಯುತ್ತಿದ್ದ ಬಿ.ವಿ.ದೇಸಾಯಿಯವರು ಸುಳ್ಳು ಹೇಳಿದರು.

"ಇತ್ತೀಚೆಗೆ ಸ್ವಾತಂತ್ರ್ಯ ಹೋರಾಟಗಾರರು ನಿಜಾಮ ಸರ್ಕಾರದ ವಿರುದ್ಧ ಜನರನ್ನು ಎತ್ತಿಕಟ್ಟಲು ಪ್ರಯತ್ನಿಸುತ್ತಿದ್ದಾರೆ. ಹಪ್ತೆ (ಹೊಲದ ತೆರಿಗೆ) ಕೊಡಬೇಡಿ ಸರ್ಕಾರಕ್ಕೆ ಸಹಾಯ ಮಾಡಬೇಡಿ ಎಂದು ಹೇಳ್ತಾರ. ಇದು ದೇಶದ್ರೋಹ. ನೀವು ತರಲಕಟ್ಟಿಗೆ ಬನ್ನಿರಿ. ನಮ್ಮ ಸಾಹೇಬರ ಪರವಾನಿಗೆ ಪಡೆದು ಹೋಗಿರಿ" ಎಂದು ಪೋಲಿಸರು ಹೇಳಿದರು.



ಬಿ.ವಿ.ದೇಸಾಯಿಯವರು ದೀನತೆಯಿಂದ "ಯಪ್ಪಾ, ಪೋಲಿಸಪ್ಪ, ನಾವು ರೈತರು ಸುಳ್ಳು ಹೇಳೋದಿಲ್ಲ. ನಮ್ಮಣ್ಣಗೆ ಬಹಳ ಜ್ವರ ಬಂದಾವ. ಮೈ ಸುಡತೈತಿ, ಗಡಗಡ ನಡಗ್ತಾನ. ಬೆಳಗಾಗುತ್ತಲೆ ಹೋಗದಿದ್ರೆ ಅವನು ಸಾಯ್ತಾನ. ನಿಮ್ಮ ಕಾಲ ಬೀಳ್ತಿನಿ. ಪುಣ್ಯ ಕಟ್ಟಿಕೊಳ್ಳಿ" ಎಂದು ಅಂಗಲಾಚಿದನು.

"ನಮ್ಮ ಸಾಹೇಬರು ಯಾರನ್ನು ರಾತ್ರಿ ಬಿಡಬಾರದು ಅಂತ ಹೇಳ್ಯಾರ. ಆದರ ನಿಮ್ಮ ಅಣ್ಣಗೆ ಜ್ವರ ಬಂದಾವ ಅಂತ ಹೇಳ್ತಿರಿ. ಇರ್ಲಿ, ಐದು ರೂಪಾಯಿ ಬಕ್ಷೀಸ್ ಕೊಟ್ರ ಬಿಟ್ಟು ಬಿಡುತ್ತೇವೆ ಎಂದರು ಪೋಲಿಸರು.

"ದೊಡ್ಡ ಮನಸ್ಸು ಮಾಡ್ರಿ. ನಮ್ಮ ಕಡಿಗೆ ಅಷ್ಟು ದುಡ್ಡಿಲ್ಲ. ಎರಡು ರೂಪಾಯಿ ಆದಾವ. ಅವು ಡಾಕ್ಟರಗಂತ ಇಟಗೊಂಡಿವಿ. ನಮ್ಮನ್ನು ಬಿಟ್ಟ ಬಿಡ್ರಿ. "



"ಆ ಎರಡು ರೂಪಾಯಿ ನಮಗೆ ಕೊಡ್ರಿ, ನಾವು ಬಿಟ್ಟು ಬಿಡ್ತಿವಿ. ಜಲ್ದಿ ಜಲ್ದಿ ಸೀಮೆ ದಾಟಿರಿ". ಎರಡು ರೂಪಾಯಿ ಪಡೆದು ಪೋಲಿಸರು ಹೋಗುವರು. ಇತ್ತ ವೇಗವಾಗಿ ಬಂಡಿ ಹೊಡೆದುಕೊಂಡು ಗಜೇಂದ್ರಗಡ ಶಿಬಿರಕ್ಕೆ ಇವರು ಹೋದರು.

ಲಂಚಕೊಟ್ಟು ಪೋಲಿಸರಿಂದ ಪಾರಾಗಿ ಬಂದಿದ್ದನ್ನು ಶಿಬಿರದಲ್ಲಿ ಹೇಳಿದರು. ಅದೊಂದು ಸಾಹಸವೆಂಬತೆ ಬಣ್ಣಿಸಿದರು. ಅಲ್ಲಿದ್ದವರೆಲ್ಲಾ ಭೇಷ್ ಎಂದರು. ಆದರೆ ಶಿಬಿರದ ಗುರುಗಳಾದ ತಪಸ್ವಿ ಭೀಮಜ್ಜ ಮುರಡಿಯವರು ಇದನ್ನು ಕೇಳಿ ಹೌಹಾರಿದರು. ಮಾತೇ ಹೊರಡಲಿಲ್ಲ. ತಲೆಗೆ ಕೈಯಿಟ್ಟರು. ಅಯ್ಯೋ ! ನನ್ನ ಶಿಷ್ಯರು ಲಂಚಕೊಟ್ಟರೆ ? ಕೆಲಸ ಸಾಧಿಸಲು ಇಂತಹ ಹೀನ ಆಚಾರಕ್ಕೆ ಇಳಿದರೆ ? ಎಂದು ಗಳಗಳನೆ ಅತ್ತರು.

ನಾನು ಹೇಳಿಕೊಟ್ಟ ವಿದ್ಯೆ ವ್ಯರ್ಥವಾಯಿತು . ನಾಯಕರೆನಿಸಿಕೊಂಡವರೇ ಹೀಗೇ ಮಾಡಿದರೆ ಉಳಿದವರ ಗತಿ ಏನು? ಮಾದರಿಯಾಗಿ ಇರಬೇಕಾದವರೇ, ಹೀಗಾದರೆ ಮುಂದೆ ದೇಶದ ಭವಿಷ್ಯ ಹೇಗೆ? ಎಂದು ಹೇಳುತ್ತ ಕಣ್ಣೀರು ಹಾಕುತ್ತ ಬಿಕ್ಕ ಹತ್ತಿದರು.

ಸೇರಿದ್ದ ಶಿಬಿರದ ಜನರ ಮುಖ ಬಾಡಿತು. ಮೌನ ಆವರಿಸಿತು. ಗುರುಗಳು ಎದ್ದು ನಿಂತರು. **ಲಂಚಕೊಡುವುದು–ತೆಗೆದುಕೊಳ್ಳುವುದು ಮಹಾಪರಾಧ. ನನ್ನ ನಡೆಯಲ್ಲಿ ತಪ್ಪಿರಬೇಕು. ಅದಕ್ಕಾಗಿ ಶಿಷ್ಯರು ತಪ್ಪುಮಾಡಿರಬೇಕು. ಇದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು** ಎಂದು ಉಪವಾಸ ಪ್ರಾರಂಭಿಸಿದರು.

ಶಿಷ್ಯರೆಲ್ಲರೂ ತಮ್ಮ ತಪ್ಪನ್ನು ಅರಿತರು. ಇನ್ನುಮೇಲೆ ಜೀವನದಲ್ಲಿ ಲಂಚ ಕೊಡುವುದಿಲ್ಲ. ಲಂಚ ಪಡೆಯುವದಿಲ್ಲವೆಂದು ಶಪಥ ಮಾಡಿದರು. ಗುರುಗಳ ಜೊತೆಗೆ ಉಪವಾಸ ಕೈಗೊಂಡರು. ಮನಸ್ಸನ್ನು ಶುದ್ಧಿ ಮಾಡಿಕೊಂಡರು.

## ಗಮನಿಸಿ– ಓದು

ಸರಿರಾತ್ರಿ –ರಾತ್ರಿ ೧೨ ಗಂಟೆ, ಮೌನ – ಶಾಂತ, ನಿನಾದ– ಸುಸ್ವರ, ಭಯ–ಅಂಜಿಕೆ, ಹೆದರಿಕೆ, ಹಂಚಿಕೆ – ಉಪಾಯ, ಅಂಗಲಾಚು– ಬೇಡಿಕೊಳ್ಳು, ಮಹಾ– ದೊಡ್ಡ, ಅಪರಾಧ –ತಪ್ಪು, ಶಪಥ –ಪ್ರತಿಜ್ಞೆ

## ಗಮನಿಸಿ ತಿಳಿ

ಹೈದ್ರಾಬಾದ್‌ಪ್ರಾಂತ – ೧೬ ಜಿಲ್ಲೆಗಳನ್ನು ಒಳಗೊಂಡ ರಾಜ್ಯವಾಗಿತ್ತು. ಕನ್ನಡ ಮಾತನಾಡುವ ಬೀದರ್, ಗುಲ್ಬರ್ಗ, ರಾಯಚೂರು ಜಿಲ್ಲೆಗಳು ಸೇರಿದ್ದವು. ವೇಷ ಮರೆಸು – ರೂಪ ಬದಲಾಯಿಸು, ಕಣ್ಣು ತಪ್ಪಿಸು – ಗಮನ ತಪ್ಪಿಸು, ಎತ್ತಿ ಕಟ್ಟು – ಪ್ರಚೋದಿಸು, ದೇಶದ್ರೋಹ – ದೇಶಕ್ಕೆ ಕೇಡು ಬಗೆಯುವುದು, ಪರವಾನಿಗೆ – ಅಪ್ಪಣೆ, ಬಕ್ಷೀಸು (ಉರ್ದು ಶಬ್ದ) – ಬಹುಮಾನ, ಜಲ್ದಿ ಜಲ್ದಿ(ಉರ್ದುಶಬ್ದ) – ವೇಗ ವೇಗವಾಗಿ, ಹೌಹಾರು–ಗಾಬರಿಯಾಗು, ತಲೆಗೆ ಕೈಯಿಡು–ಚಿಂತೆ ಮಾಡು. ಪ್ರಾಯಶ್ಚಿತ್ತ – ಮಾಡಿದ ತಪ್ಪಿಗೆ ಶಾಸ್ತ್ರ ಸಮ್ಮತ ನಿವಾರಣೆ ಕ್ರಮ, ಗಳಗಳನೆ – ಬಿಟ್ಟು ಬಿಡದೆ, ಒಂದೇ ಸಮನೆ, ಕೈ ಕೊಳ್ಳು – ಮಾಡು, ಗಜೇಂದ್ರಗಡ, ಗುನ್ನಾಳ, ತರಲಕಟ್ಟಿ, ಮಾಟಲದಿನ್ನಿ ಇವು ಊರುಗಳ ಹೆಸರುಗಳು.



## ಅಭ್ಯಾಸ

### ೧. ಒಂದೊಂದು ವಾಕ್ಯದಲ್ಲಿ ಉತ್ತರಿಸಿ.

ಅ) ಬಂಡಿಯಲ್ಲಿ ಯಾರು ಯಾರು ಇದ್ದರು?

ಆ) ಅವರು ಎಲ್ಲಿಗೆ ಹೊರಟಿದ್ದರು ?

ಇ) ಇವರ ಬಂಡಿಯನ್ನು ಯಾರು ತಡೆದರು ?

ಈ) ಪೋಲಿಸರು ಏನೆಂದು ಪ್ರಶ್ನಿಸಿದರು?

ಉ) ಪೋಲಿಸರು ಇವರನ್ನು ಬಿಡಲು ಏನು ಕೊಡಬೇಕೆಂದು ಕೇಳಿದರು?

ಊ) ಸ್ವಾತಂತ್ರ್ಯ ಹೋರಾಟಗಾರರು ಪೊಲೀಸರಿಗೆ ಎಷ್ಟು ಹಣ ಕೊಟ್ಟರು ?

ಋ) ಸ್ವಾತಂತ್ರ್ಯ ಹೋರಾಟಗಾರರ ಸಾಹಸ ಕೇಳಿ ಯಾರು ಅತ್ತರು ?

### ೨. ಯಾರು ಯಾರಿಗೆ ಹೇಳಿದರು ?

ಅ) "ಇಷ್ಟು ರಾತ್ರಿ ಎಲ್ಲಿಗೆ ಹೊರಟಿರುವಿರಿ" ?

ಆ) "ನಮ್ಮಣ್ಣನಿಗೆ ಜ್ವರ ಬಂದಿದೆ"

ಇ) "ಐದು ರೂಪಾಯಿ ಬಕ್ಷೀಸು ಕೊಟ್ರ ಬಿಡುತ್ತೇನೆ'

ಈ) "ನಾನು ಹೇಳಿಕೊಟ್ಟ ವಿದ್ಯೆ ವ್ಯರ್ಥವಾಯಿತು?"

ಉ) "ಅಯ್ಯೋ" ನನ್ನ ಶಿಷ್ಯರು ಲಂಚ ಕೊಟ್ಟರೆ ?

**೩. ಬಿಟ್ಟ ಪದ ಬರೆಯಿರಿ.**

ಅ) ಎತ್ತಿನ ಗಂಟೆಗಳ ______________ ನಿನಾದ.

ಆ) ಪೋಲಿಸರನ್ನು ಕಂಡು ಇವರಿಬ್ಬರಿಗೂ ______________ಆವರಿಸಿತು.

ಇ) ನಿಜಾಮ ಸರ್ಕಾರದ ವಿರುದ್ಧ ಜನರನ್ನು ___________ಪ್ರಯತ್ನಿಸುತ್ತಿದ್ದಾರೆ.

ಈ) ಜ್ವರ ಬಂದಾವ ಮೈ ಸುಡುತೈತಿ ________________ ನಡಗ್ತಾನ.

ಉ) ಪೋಲಿಸರಿಂದ ಪಾರಾಗಿ ಬಂದದ್ದನ್ನು ಅದೊಂದು ______________ ವೆಂಬಂತೆ ಬಣ್ಣಿಸಿದರು.

ಊ) ಕೆಲಸ ಸಾಧಿಸಲು _____________ ಮತ್ತು _____________ ಮಹಾಪರಾಧ.

**೪. ಇವುಗಳನ್ನು ಉಪಯೋಗಿಸಿ ಸ್ವಂತ ವಾಕ್ಯಮಾಡಿರಿ.**

ಅ) ಕಣ್ಣು ತಪ್ಪಿಸು : ..............................................................

ಆ) ಎತ್ತಿಕಟ್ಟು : ..............................................................

ಇ) ಹೌಹಾರು : ..............................................................

ಈ) ತಲೆಗೆ ಕೈಯಿಡು : ..............................................................

ಉ) ಪ್ರಾಯಶ್ಚಿತ್ತ : ..............................................................

**೫. ಕೆಳಗಿನ ಪ್ರಶ್ನೆಗಳಿಗೆ ವಿಚಾರ ಮಾಡಿ ಉತ್ತರಿಸಿ.**

ಅ) ಯಾವ ಕಾರಣಕ್ಕಾಗಿ ನಿಜಾಮ ಸರ್ಕಾರವು ಪುಂಡಲೀಕಪ್ಪ ಹಾಗೂ ಬಿ.ವಿ.ದೇಸಾಯಿಯವರ ತಲೆ ತಂದವರಿಗೆ ಬಹುಮಾನ ಸಾರಿತ್ತು?

..............................................................

..............................................................

ಆ) ಪೋಲಿಸರಿಗೆ ಸ್ವಾತಂತ್ರ್ಯ ಹೋರಾಟಗಾರರು ಸುಳ್ಳು ಹೇಳಿದ್ದೇಕೆ?

..............................................................

..............................................................

ಇ) ಪೋಲಿಸರು ೨ರೂ ಬಕ್ಷೀಸನ್ನು ಪಡೆದರು. ಇದು ಸರಿಯೇ? ತಪ್ಪೆ ? ಬರೆದು ಕಾರಣ ಕೊಡಿ.

.................................................................................................

.................................................................................................

ಈ) ಮಾದರಿಯಾಗಿ ಇರಬೇಕಾದವರು ಹೇಗಿರಬೇಕು ? ಬರೆಯಿರಿ.

.................................................................................................

.................................................................................................

ಉ) ಮುರಡಿ ಭೀಮಜ್ಜನವರು ಏಕೆ ಪ್ರಾಯಶ್ಚಿತ್ತ ಮಾಡಿಕೊಂಡರು ?

.................................................................................................

.................................................................................................

**೬. ಸರಿಯಾದ ಪದವನ್ನು ಆಯ್ಕೆ ಮಾಡಿಕೊಂಡು ಬಿಟ್ಟ ಸ್ಥಳ ತುಂಬಿರಿ.**

ಅ) ಗಜೇಂದ್ರಗಡ ಶಿಬಿರಕ್ಕೆ ಹೊರಟ ಎತ್ತಿನ ಬಂಡಿಯನ್ನು ತಡೆದವರು ........................

೧) ಪೋಲಿಸರು ೨) ಕಳ್ಳರು ೩) ಸುಳ್ಳರು

೪) ಸ್ವಾತಂತ್ರ್ಯ ಹೋರಾಟಗಾರರು.

ಆ) ಹಪ್ತೆ ಎಂದರೆ ........................

೧) ಮನೆಕರ ೨) ಹೊಲದ ತೆರಿಗೆ ೩) ಲೇವಿ. ೪) ಸುಂಕ

ಇ) ಎರಡು ರೂ. ಲಂಚಕೊಟ್ಟು ಪಾರಾದವರು ........................

೧) ಬಿ.ವಿ.ದೇಸಾಯಿ, ಪುಂಡಲಿಕಪ್ಪ ಜ್ಞಾನಮೋತೆ ೨) ನಿಜಾಮ ಪೋಲಿಸರು

೩) ಕಂದಾಯ ಅಧಿಕಾರಿಗಳು ೪) ಮುರುಡಿಭೀಮಜ್ಜನವರು

ಈ) ಲಂಚ ಕೊಡುವುದು ........................

೧) ಅನುಕೂಲ ಸಿಂಧು ೨) ಮಹಾಪರಾಧ

೩) ನಿರಪರಾಧ ೪) ಭಕ್ಷೀಸು

೭. **ಈ ಪದಗಳನ್ನು ಗಮನಿಸಿ ಓದಿ.**

**ಮಾದರಿ: ಹೋರಾಟವನ್ನು + ಮಾಡುವವನು = ಹೋರಾಟಗಾರ**

ಓಲೆಯನ್ನು + ತರುವವನು = ಓಲೆಗಾರ

ಹಣವನ್ನು + ಉಳ್ಳವನು = ಹಣವಂತ

ಹೂವನ್ನು + ಕಟ್ಟುವವನು = ಹೂವಾಡಿಗ

ಲಂಚವನ್ನು + ತೆಗೆದುಕೊಳ್ಳುವವನು = ಲಂಚಗುಳಿ

ಚಿತ್ರವನ್ನು + ಬರೆಯುವವನು = ಚಿತ್ರಗಾರ

**ಓದಿ ಹೊಸಪದರಚನೆ ಮಾಡಿರಿ.**

ಹಾವನ್ನು + ಆಡಿಸುವವನು = ........................

ಮೋಸವನ್ನು + ಮಾಡುವವನು = ........................

ಮಡಿಯನ್ನು + ಮಾಡುವವನು = ........................

ಗುಣವನ್ನು + ಉಳ್ಳವನು = ........................

೮. **ಟಿಪ್ಪಣಿ ಬರೆಯಿರಿ.**

ಮುರಡಿ ಭೀಮಜ್ಜ

..........................................................................................................

..........................................................................................................

೯. **ಈ ಪದಗಳನ್ನು ೫ ಸಲ ಬರೆಯಿರಿ.**

| ಸ್ವತಂತ್ರ | ಸನ್ಯಾಸಿ | ಎತ್ತಿಕಟ್ಟು | ಅಂಗಲಾಚು | ಹೌಹಾರು |
|---|---|---|---|---|
| ................ | ................ | ................ | ................ | ................ |
| ................ | ................ | ................ | ................ | ................ |
| ................ | ................ | ................ | ................ | ................ |
| ................ | ................ | ................ | ................ | ................ |
| ................ | ................ | ................ | ................ | ................ |

## ೧೦. ಭಾಷಾ ಚಟುವಟಿಕೆ :

### ಚಿತ್ರ ನೋಡಿ ಕಥೆ ಓದು

ಒಂದು ನಲ್ಲಿ ಒಬ್ಬ ನಿದ್ದನು. ಅವನು ಒಂದು ದಿನ ಕಾಡಿಗೆ ಬೇಟೆಗೆ ಹೋದಾಗ ಯ ಮರಿಗಳು ಸಿಕ್ಕವು. ಅವುಗಳನ್ನು ಹಿಡಿದುಕೊಂಡು ಬರುವಾಗ ದಾರಿಯಲ್ಲಿ ಯ ಆಶ್ರಮವಿತ್ತು. ಋಷಿಯು ಮರಿಗಳನ್ನು ನೋಡಿ ಒಂದನ್ನು ಬೇಟೆಗಾರನಿಂದ ಕೊಟ್ಟು ಪಡೆದನು. ಇನ್ನೊಂದನ್ನು ನು ಕಟುಕನಿಗೆ ಕ್ಕೆ ಮಾರಿದನು.

ಕೆಲ ದಿನಗಳ ನಂತರ ನಿಗೆ ತಾನು ಮಾರಿದ ಗಳನ್ನು ನೋಡಲು ಆಸೆಯಾಯಿತು. ಮೊದಲು ಯ ಆಶ್ರಮಕ್ಕೆ ಹೋದನು. ಬೇಟೆಗಾರನನ್ನು ನೋಡಿದ. ಯು 'ದಯಮಾಡಿ ಒಳಗೆ ಬನ್ನಿ" ಕುಳಿತುಕೊಳ್ಳಿ ಎಂದು ಉಪಚರಿಸಿತು.

ನಂತರ ನು ಕಟುಕನ ಮನೆಗೆ ಹೋದನು. ಅಲ್ಲಿಯ ಯು "ಅವನನ್ನು ಹಿಡಿಯಿರಿ! ಹೊಡೆಯಿರಿ!! ಕಡಿಯಿರಿ !!!" ಎಂದು ಕೂಗಿ ಕೂಗಿ ಹೇಳಿತು. ಇದನ್ನು ಕೇಳಿ ನಿಗೆ ಬಹಳ ದುಃಖವಾಯಿತು.

ಈ ಗಳು ಒಂದೇ ತಾಯಿಯ ಮರಿಗಳಾಗಿದ್ದರೂ ಏಕೆ ಭಿನ್ನ ಭಿನ್ನವಾಗಿ ವರ್ತಿಸಿದವು? ಇದಕ್ಕೆ ಕಾರಣ ಅವು ಬೆಳೆದಂತಹ ವಾತಾವರಣ ಮತ್ತು ಪರಿಸರ. ಯ ಆಶ್ರಮದಲ್ಲಿ ಬೆಳೆದ ಯು ಒಳ್ಳೆಯ ಮಾತುಗಳನ್ನು ಕಲಿಯಿತು. ಆದರೆ ಕಟುಕನ ಮನೆಯಲ್ಲಿ ಬೆಳೆದ ಯ ಮರಿಯು ಅಲ್ಲಿಯ ಕಸುಬಿಗೆ ತಕ್ಕಂತಹ ಮಾತುಗಳನ್ನು ಕಲಿಯಿತು.

**ನೀತಿ: ಬಿತ್ತಿದಂತೆ ಬೆಳೆ.**



## ಪದ್ಯ ಪಾಠ – ೬

# ಉದಯ ರಾಗ



ಮೂಡುವನು ರವಿ ಮೂಡುವನು
ಕತ್ತಲೊಡನೆ ಜಗಳಾಡುವನು
ಮೂಡಣ ರಂಗಸ್ಥಳದಲಿ ನೆತ್ತರು
ಮಾಡುವನು ಕುಣಿದಾಡುವನು.

ಬಂಗಾರದ ಚೆಲು ಬಿಸಿಲ ಕಿರೀಟದ
ಶೃಂಗಾರದ ತಲೆ ಎತ್ತುವನು,
ತೆಂಗಿನ ಕಂಗಿನ ತಾಳೆಯ ಬಾಳೆಯ
ಅಂಗಕೆ ರಂಗನು ಮೆತ್ತುವನು.

ಮಾಡಿನ ಹುಲ್ಲಲಿ ಚಿನ್ನದ ಗೆರೆಯನು
ಎಳೆಯುವನು, ರವಿ ಎಳೆಯುವನು;
ಕೂಡಲ ಕೋಣೆಯ ಕತ್ತಲೆ ಕೊಳೆಯನು
ತೊಳೆಯುವನು, ರವಿ ಹೊಳೆಯುವನು.

ಏರುವನು ರವಿ ಏರುವನು
ಬಾನೊಳು ಸಣ್ಣಗೆ ತೋರುವನು
ಏರಿದವನು ಚಿಕ್ಕವನಿರಬೇಕು
ಎಂಬಾ ಮಾತನು ಸಾರುವನು.

–ಪಂಜೆ ಮಂಗೇಶರಾಯ

## ಕವಿ ಕೃತಿ ಪರಿಚಯ : ಪಂಜೆ ಮಂಗೇಶರಾಯರು



ಪಂಜೆ ಮಂಗೇಶರಾಯರು ದಕ್ಷಿಣ ಕನ್ನಡ ಜಿಲ್ಲೆಯ ಬಂಟವಾಳ ತಾಲೂಕಿನ ಪಂಜೆ ಗ್ರಾಮದವರು. ಇವರು ೨೨ ನೇ ಫೆಬ್ರವರಿ ೧೮೭೪ರಲ್ಲಿ ಜನಿಸಿದರು. ಇವರು ಕನ್ನಡ ಸಾಹಿತ್ಯದ ನವೋದಯ ಕಾಲದ ಕವಿಗಳು ಹಾಗೆಯೇ ಶ್ರೇಷ್ಠ ಶಿಕ್ಷಕರು ಆಗಿದ್ದರು. ಇವರು 'ಹುತ್ತರಿ ಹಾಡು', 'ತೆಂಕಣಗಾಳಿಯಾಟ:', 'ನಾಗರಹಾವು' ಮುಂತಾದವು ಜನಪ್ರಿಯ ಪದ್ಯಗಳಾಗಿವೆ. 'ಕೊಕ್ಕೊಕೊ ಕೋಳಿ', 'ಗುಡುಗುಡು ಗುಮ್ಮಟದೇವ', 'ಕೋಟಿ ಚನ್ನಯ್ಯ', 'ಇಲಿಗಳ ಥಕ ಥೈ' ಇತ್ಯಾದಿ ಮಕ್ಕಳ ಸಾಹಿತ್ಯ ರಚಿಸಿದ್ದಾರೆ. ೧೯೩೪ರಲ್ಲಿ ರಾಯಚೂರಿನ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ೧೯೩೭ ಅಕ್ಟೋಬರ್ ೨೫ ರಂದು ದೈವಾಧೀನರಾದರು.

ಕವಿ ಇಲ್ಲಿ ಸೂರ್ಯೋದಯವನ್ನು ತುಂಬ ಸೊಗಸಾಗಿ ವರ್ಣಿಸಿದ್ದಾರೆ. ಬೆಳಕು ಕತ್ತಲನ್ನು ಹೊಡೆದೋಡಿಸುವ ಸಂದರ್ಭವನ್ನು ಕತ್ತಲೊಡನೆ ರವಿ ಜಗಳಾಡುವನು ಎಂದು ವರ್ಣಿಸಿದ್ದಾರೆ. ಸೂರ್ಯ ಬಂಗಾರದ ಬಣ್ಣದ ಕಿರೀಟ ಧರಿಸಿ ಉದಯಿಸಿದಾಗ ಅವನ ಕಿರಣಗಳ ಸುಂದರತೆಯನ್ನು ಬಣ್ಣಿಸಿದ್ದಾರೆ. ರವಿ ಕತ್ತಲನ್ನು ಕಳೆದಂತೆ ಜ್ಞಾನ ಮಾನವನ ಮನದ ಕತ್ತಲನ್ನು ತೊಳೆಯುತ್ತದೆ. ಉನ್ನತ ಸ್ಥಾನಕ್ಕೇರಿದ ವ್ಯಕ್ತಿ, ಅಹಂಕಾರವನ್ನು ಹೊಂದಿರಬಾರದು. ನಾನು ಚಿಕ್ಕವನು ಎನ್ನುವ ಭಾವ ಬೆಳೆಸಿಕೊಳ್ಳಲು ಮಾರ್ಮಿಕವಾಗಿ ತಿಳಿಸಿದ್ದಾರೆ.



### ಓದಿ – ತಿಳಿ

ಮೂಡಣ = ಪೂರ್ವ, ಸೂರ್ಯ ಉದಯಿಸುವ ದಿಕ್ಕು, ನೆತ್ತರು = ರಕ್ತ, ಶೃಂಗಾರ = ನವರಸಗಳಲ್ಲಿ ಒಂದು, ಕಿರೀಟ = ಮುಕುಟ, ಕಂಗು = ಅಡಿಕೆ, ಅಂಗ= ದೇಹ, ರಂಗು = ಬಣ್ಣ, ಮಾಡಿನ = ಛಾವಣಿಯ, ಉಪ್ಪರಿಗೆಯ, ಚಿನ್ನದ=ಬಂಗಾರದ, ಬಾನು =ಆಕಾಶ, ಕೊಳೆ= ಹೊಲಸು, ಕಸ, ಸಾರು = ಹೇಳು.

### ಗಮನಿಸಿ ಓದು

ರಂಗಸ್ಥಳ : ಯುದ್ಧಭೂಮಿ, ನಾಟಕ ಪ್ರಯೋಗಿಸುವ ಸ್ಥಳ. ಮೆತ್ತುವನು : ಹಚ್ಚುವನು, ಬಳಿಯುವನು. ಕೂಡಲ ಕೋಣೆ : ಪಡಸಾಲೆ, ಮೊಗಸಾಲೆ

## ಅಭ್ಯಾಸ

**೧. ಒಂದು ವಾಕ್ಯದಲ್ಲಿ ಉತ್ತರಿಸಿರಿ.**

ಅ) ರವಿ ಯಾರೊಡನೆ ಜಗಳಾಡುವವನು ?

ಆ) ರವಿ ಎಲ್ಲಿ ಕುಣಿದಾಡುವವನು ?

ಇ) ಚಿನ್ನದ ಗೆರೆಯನು ಯಾರು ಎಳೆದರು ?

ಈ) ರವಿ ಯಾವುದನ್ನು ತೊಳೆಯುವವನು ?

ಉ) ರವಿ ಬಾನೊಳು ಹೇಗೆ ತೋರುವವನು?

**೨. ಎರಡು ವಾಕ್ಯದಲ್ಲಿ ಹೇಳಿರಿ.**

ಅ) ರವಿ ಏತಕ್ಕಾಗಿ ಕುಣಿದಾಡುವವನು ?

ಆ) ಮಾಡಿನ ಹುಲ್ಲಲಿ ರವಿ ಏನನ್ನು ಎಳೆಯುವವನು ?

ಇ) ರವಿ ಯಾವ ಮಾತನ್ನು ಸಾರುವವನು ಎಂದು ಕವಿ ಹೇಳಿದ್ದಾನೆ ?

**೩. ಹೊಂದಿಸಿ ಬರೆಯಿರಿ.**

| ಅ | ಆ | |
|---|---|---|
| ಅ) ಕತ್ತಲೊಡನೆ | ೧) ಸಣ್ಣಗೆ ತೋರುವವನು | .............................. |
| ಆ) ಶೃಂಗಾರದ | ೨) ಎಳೆಯುವವನು | .............................. |
| ಇ) ಅಂಗಕೆ | ೩) ಜಗಳಾಡುವವನು | .............................. |
| ಈ) ಚಿನ್ನದ ಗೆರೆಯನು | ೪) ರಂಗನು ಮೆತ್ತುವವನು | .............................. |
| ಉ) ಬಾನೊಳು | ೫) ತಲೆ ಎತ್ತುವವನು | .............................. |

**೪. ಈ ಪದಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಬರೆಯಿರಿ.**

ಅ) ಮೂಡಣ : ..........................................................................

ಆ) ಕುಣಿದಾಡು : ..........................................................................

ಇ) ಮೆತ್ತು : ..........................................................................

ಈ) ಬಾನು : ..........................................................................

ಉ) ಸಾರು : ..........................................................................

**೫. ಸರಿಯಾದ ಪದವನ್ನು ಆರಿಸಿ ಬಿಟ್ಟ ಸ್ಥಳ ತುಂಬಿರಿ.**

ಅ) ಮೂಡುವನು .................. ಮೂಡುವನು

೧) ರವಿ ೨) ಗವಿ ೩) ಕವಿ ೪) ಸವಿ

ಆ) ರಂಗಸ್ಥಳದಲ್ಲಿ ನೆತ್ತರ ಮಾಡುವನು, ..................

೧) ನಡೆದಾಡುವನು ೨) ಜಗಳಾಡುವನು

೩) ಆಟವಾಡುವನು ೪) ಕುಣಿದಾಡುವನು

ಇ) ತೆಂಗಿನ ಕಂಗಿನ ಅರ್ಥ ..................

೧) ತೆಂಗು–ಅಡಿಕೆ ೨) ಕಾಯಿ–ಕೊಳೆ

೩) ತೆಂಗು –ಬಾಳೆ ೪) ಕಾಯಿ–ಪಲ್ಯೆ

ಈ) ರವಿ ಮಾಡಿನ ಹುಲ್ಲಲಿ .................. ಗೆರೆಯನು ಎಳೆಯುವನು

೧) ರನ್ನದ ೨) ಚಿನ್ನದ ೩) ತಾಮ್ರದ ೪) ವಜ್ರದ

ಉ) ಬಾನೊಳು ಏರಿದ ರವಿ .................. ತೋರುವನು.

೧) ಸಣ್ಣಗೆ ೨) ಬೆಳ್ಳಗೆ ೩) ನುಣ್ಣಗೆ ೪) ತಣ್ಣಗೆ

**೬. ಈ ಪದಗಳಿಗೆ ಶಬ್ದಕೋಶ ನೋಡಿ ಸಮನಾರ್ಥಕ ಪದ ಬರೆಯಿರಿ.**

ಅ) ರವಿ .................. ..................

ಆ) ಮೂಡಣ .................. ..................

ಇ) ಕಿರೀಟ .................. ..................

ಈ) ಕುಣಿ .................. ..................

ಉ) ಬಾನು .................. ..................

**೭. ಈ ಕವಿತೆಯಲ್ಲಿರುವ ೩ ಪ್ರಾಸ ಪದ ಹುಡುಕಿ ಬರೆಯಿರಿ.**

ಮಾದರಿ : ರವಿ – ಕವಿ

................. – .................

................. – .................

................. – .................

೮. ಈ ಪದಗಳನ್ನು ಬಿಡಿಸಿ ಬರೆಯಿರಿ.

ಜಗಳವಾಡು : .................. + ..................

ಕುಣಿದಾಡು : .................. + ..................

ಚಿಕ್ಕವನಿರಬೇಕು : .................. + ..................

೯. ಮಾದರಿಯಂತೆ ಸಂಬಂಧಪಡದ ಪದ ಹೊರ ತೆಗೆದು ಬರೆಯಿರಿ.

ಮಾದರಿ: ಸಾರು, ಹೇಳು, ಕೇಳು, ನುಡಿ,– (ಕೇಳು)

ಅ) ಸೂರ್ಯ, ರವಿ, ಚಂದ್ರ, ದಿನಕರ – ..................

ಆ) ಕಿರೀಟ , ಕೊರಳ ಹಾರ, ರುಮಾಲು, ಮುಕುಟ – ..................

ಇ) ಬೆಳ್ಳಿ, ಬಂಗಾರ, ಚಿನ್ನ, ಸ್ವರ್ಣ – ..................

ಈ) ಆಕಾಶ, ಮೋಡ, ಬಾನು, ನಭ – ..................

೧೦. ಈ ತ್ರಿಪದಿ ಓದಿ ಪ್ರಶ್ನೆಗಳಿಗೆ ಉತ್ತರಿಸಿರಿ.

ಮುಂಗೋಳಿ ಕ್ಯೂಗಾವು ಮೂಡು ಕೆಂಪೇರ್ಯಾವು
ಸ್ವಾಮಿ ನನ್ನಯ್ಯ ರಥವೇರಿ । ಬರುವಾಗ
ನಾವೆದ್ದು ಕೈ ಮುಗಿದೇವು ॥

ಪ್ರಶ್ನೆಗಳು :

ಅ) ಮುಂಗೋಳಿ ಕೂಗಿದಾಗ ಎಲ್ಲಿ ಕೆಂಪೇರುತ್ತದೆ.?

........................................................................................

ಆ) ಸ್ವಾಮಿ ನನ್ನಯ್ಯ ರಥವೇರಿ ಬರುವನು ಎಂದರೆ ಯಾರು ?

........................................................................................

ಇ) ಅವನು ಬರುವಾಗ ಜನರು ಏನು ಮಾಡುವರು?

........................................................................................

೧೧. ಚಟುವಟಿಕೆ : ಸೂರ್ಯೋದಯದ ಚಿತ್ರ ಬರೆದು ಬಣ್ಣ ಹಾಕಿರಿ.

## ಗದ್ಯ ಪಾಠ – ೭

# ಒಂದು ಪತ್ರಿಕೆ ವರದಿ

## ಸಾಹಸಸಿಂಹ ಅಬ್ದುಲ್ ಹಮೀದ್

**ಕಾಶ್ಮೀರ : ಸೆಪ್ಟೆಂಬರ್ ೧೬, ೧೯೬೫**

ಯುದ್ಧ! ಪಾಕಿಸ್ತಾನದ ಭೂಸೇನೆಯ ರಾಕ್ಷಸಾಕಾರದ ಪ್ಯಾಟನ್ ಟ್ಯಾಂಕರ್‌ಗಳು! ಅವು ರಭಸದಿಂದ ಮುನ್ನುಗ್ಗುತ್ತಿದ್ದವು. ಅದರೊಡಲಿನಿಂದ ಸಾವಿರ ಸಾವಿರ ಫಿರಂಗಿಗಳು ಢಂ ಢಂ ಎಂದು ಸಿಡಿಯುತ್ತಿದ್ದವು. ಹತ್ತು ಹನ್ನೆರಡು ಮೈಲಿಗಳವರೆಗೂ ಬೆಂಕಿ ಹರಡುತ್ತಿತ್ತು. ಎದುರು ಬಂದುದೆಲ್ಲಾ ಸುಟ್ಟು ಕರಕಲಾಗುತ್ತಿತ್ತು. ಇದರ ಅಬ್ಬರ'ಕ್ಕೆ ಭಾರತದ ಸೈನ್ಯ ಸಾವು ನೋವಿನಿಂದ ತತ್ತರಿಸಿತು. ಸೈನಿಕರು ಗಾಬರಿಯಾದರು. ದಿಕ್ಕೆಟ್ಟು ಚದುರಿದರು. ಈ ಸವಾಲನ್ನು ಎದುರಿಸುವುದು ಹೇಗೆ? ಎಂದು ತಿಳಿಯದಾದರು.





ಬೆಂಕಿಯುಗುಳುವ ಟ್ಯಾಂಕರಿನ ಮುಂದೆ ನಿಂತು ಅದನ್ನು ಸಿಡಿಸಬೇಕಾಗಿತ್ತು. ಅದಕ್ಕಾಗಿ ಪ್ರಾಣದ ಆಸೆ ಬಿಡಬೇಕಿತ್ತು. ಸಾವಿನ ಸಿದ್ಧತೆಯಲ್ಲಿ ಸಾಧನೆ ಮಾಡಬೇಕಿತ್ತು. ಇಂತಹ ಬಲಿದಾನಕ್ಕೆ ಒಬ್ಬ ತರುಣ ಸಿದ್ಧನಾದ. ಅವನೊಬ್ಬ ಹವಾಲ್ದಾರ. ತನ್ನ ಪುಟ್ಟ ತುಕಡಿಗೆ ಸ್ಥಳದಲ್ಲಿಯೇ ಕಾಯಲು ಹೇಳಿದ. ಸಾಮಾನ್ಯ ಜೀಪನ್ನೇರಿ ಹಲವು ಗ್ರೇನೇಡ್‌ಗಳನ್ನು ತುಂಬಿಕೊಂಡು ಹೊರಟನು. ಅವನನ್ನು ಬೆನ್ನಟ್ಟಿದ ಟ್ಯಾಂಕರ್‌ಗಳ ಗುರಿಯನ್ನು ತಪ್ಪಿಸಿಕೊಂಡು

ಅತ್ತ ಇತ್ತ ನೆಗೆದನು. ಧುತ್ತೆಂದು ಒಂದು ಟ್ಯಾಂಕರ್ ಎದುರಿಗೆ ನಿಂತನು. ಅದರ ಎದೆಗೆ ಗುರಿಯಿಟ್ಟು ಗ್ರೆನೇಡ್ ಒಗೆದನು. ಗುರಿ ತಲುಪಿತು. ಟ್ಯಾಂಕರ್ ದೊಡ್ಡ ಶಬ್ದ ಮಾಡಿ ಛಿದ್ರ-ಛಿದ್ರವಾಯಿತು.



ಆ ಆವೇಶದಲ್ಲಿ "ವಂದೇ ಮಾತರಂ" ಎನ್ನುತ್ತಾ ಒಂದರ ಮೇಲೊಂದರಂತೆ ನಾಲ್ಕೈದು ಟ್ಯಾಂಕರ್‌ಗಳನ್ನು ಸಿಡಿಸಿದ. ಭಾರತಮಾತೆ ಅವನನ್ನು ತುಂಬಿಕೊಂಡಿದ್ದಳು. "ಜೈಹಿಂದ್" ರೋಮಾಂಚನಗೊಳಿಸಿತ್ತು. ವೈರಿ ಸೇನೆಯ ಟ್ಯಾಂಕರ್‌ಗಳು ಧೂಳಿಪಟವಾದವು. ಇವನ ಹೋರಾಟಕ್ಕೆ ಪಾಕ್ ಸೇನೆ ಕಂಗೆಟ್ಟಿತು. ಇವನ ಮೇಲೆ ಗುಂಡಿನ ದಾಳಿ ನಡೆಸಿತು. ಕುಸಿದು ಬಿದ್ದನು. ತನ್ನ ಸೈನಿಕರಿಗೆ ಆಕ್ರಮಣಕ್ಕೆ ಆದೇಶ ನೀಡಿ ಅಸುನೀಗಿದನು. ಅಂದು ಸೆಪ್ಟೆಂಬರ್ ೧೦, ೧೯೬೫. ಈ ತರುಣನೇ ಹವಾಲ್ದಾರ್ ಅಬ್ದುಲ್ ಹಮೀದ್.

**ಸಂದರ್ಭ:** ಪಾಕಿಸ್ತಾನವು ೧೯೬೫ ರಲ್ಲಿ ಭಾರತದ ಮೇಲೆ ಯುದ್ಧ ಸಾರಿತು. ಕಾಶ್ಮೀರ ಕಬಳಿಕೆ ಅದರ ಉದ್ದೇಶ. ಲಾಹೋರ ವಲಯದ ಕಸೂರ್ ರಣರಂಗದಲ್ಲಿ ಈ ಮೈನವಿರೇಳಿಸುವ ಘಟನೆ ಜರುಗಿತು.



ಉತ್ತರ ಪ್ರದೇಶದ ಘಟ್ಟಹಳ್ಳಿ ಧಾಮುಪುರದಲ್ಲಿ ೧೯೩೩ ಜುಲೈ ೧ ರಂದು ಇವರು ಜನಿಸಿದರು. ಬಾಲ್ಯದಿಂದಲೂ ಹಮೀದನಿಗೆ ಕುಸ್ತಿ, ಶಿಕಾರಿಗಳೆಂದರೆ ಹೆಚ್ಚು ಪ್ರೀತಿ. ತನ್ನ ಶಕ್ತಿ ಸಾಹಸಗಳನ್ನು ಸದುಪಯೋಗ ಮಾಡಿಕೊಳ್ಳಲು ಭಾರತೀಯ ಸೇನೆಗೆ ಸೇರಿದ. ಸಾಮಾನ್ಯ ಸಿಪಾಯಿಯಾಗಿ ಸಾಹಸಗೈಯುತ್ತಾ ಹವಾಲ್ದಾರ್ ಹುದ್ದೆಗೇರಿದ. ದೇಶಕ್ಕಾಗಿ ಪ್ರಾಣತ್ಯಾಗ ಮಾಡಿದನು.

ಭಾರತ ಸರಕಾರ ಇವರಿಗೆ ಮರಣೋತ್ತರವಾಗಿ ಶೌರ್ಯಕ್ಕೆ ಮೀಸಲಾದ "ಪರಮವೀರ ಚಕ್ರ" ಪ್ರಶಸ್ತಿಯನ್ನು ಕೊಟ್ಟು ೧೯೬೫ ಸೆಪ್ಟೆಂಬರ್ ೧೬ರಂದು ಗೌರವಿಸಿತು.

**ಜೈ ಹಿಂದ್ ಜೈ ಜವಾನ್**

## ಓದಿ – ತಿಳಿ

ರಾಕ್ಷಸಾಕಾರ – ದೈತ್ಯಾಕಾರ, ರಭಸ – ವೇಗ, ಪ್ರಾಣ – ಜೀವ, ಅಬ್ಬರ – ಆರ್ಭಟ, ಸಿದ್ಧತೆ – ಪೂರ್ವಭಾವಿ ತಯಾರಿಕೆ. ಸಾಧನೆ – ಸಾಧಿಸುವಿಕೆ, ಪರಿಶ್ರಮ, ವೈರಿ – ಶತ್ರು, ಹಗೆ, ರೋಮಾಂಚನ – ಮೈ ನವಿರೇಳು, ಪುಳಕ, ದಾಳಿ – ಆಕ್ರಮಣ.

## ಗಮನಿಸಿ ತಿಳಿ

ಪ್ಯಾಟನ್ ಟ್ಯಾಂಕರ್‌ಗಳು : ೧೯೬೫ ರ ಯುದ್ಧದಲ್ಲಿ ಬಳಸಿದ ಸುಸಜ್ಜಿತ ಯುದ್ಧವಾಹನ. ಪಾಕಿಸ್ತಾನ ಇದನ್ನು ಅಮೇರಿಕಾದಿಂದ ಖರೀದಿಸಿತ್ತು.

ಫಿರಂಗಿ : ಬಹಳ ದೂರದಿಂದ ಗುಂಡು ಹಾರಿಸುವ ತುಪಾಕಿ.

ಛಿದ್ರ ಛಿದ್ರ : ಬಿರುಕು, ಚೂರು ಚುರಾಗು

ಸುಟ್ಟು ಕರಕಲಾಗು : ಸುಟ್ಟು ಬೂದಿಯಾಗು, ನಾಶವಾಗಿ ಹೋಗುವುದು

ತತ್ತರಿಸು : ನಡುಗು, ತಡವರಿಸು.

ಕಬಳಿಸು : ಕಿತ್ತುಕೊಳ್ಳುವುದು.

ದಿಕ್ಕೆಟ್ಟು : ಕಂಗಾಲಾಗು, ದಿಕ್ಕುತೋಚದಾಗು

ಹವಾಲ್ದಾರ್ : ಸೈನ್ಯದ ಒಬ್ಬ ಅಧಿಕಾರಿ

ಗ್ರೇನೇಡ್ : ಬಾಯಲ್ಲಿ ಕಚ್ಚಿ ಎಸೆಯುವ ಗುಂಡು, ಷೆಲ್

ಬೆನ್ನಟ್ಟು : ಹಿಂಬಾಲಿಸು.

ಕಂಗೆಡು : ಭಯಪೂರಿತವಾಗಿ, ದಿಕ್ಕು ಕಾಣದಾಗು

ಕುಸಿದುಬೀಳು : ಆಘಾತಗೊಂಡು ಬೀಳುವುದು

ಸಿಪಾಯಿ : ಸೈನಿಕ

ತುಕಡಿ : ಸೈನ್ಯದ ಒಂದು ಭಾಗ

ಧಾಮುಪುರ : ಉತ್ತರ ಪ್ರದೇಶದ ಘಾಜೀಪುರ ಜಿಲ್ಲೆಯ ಸೈದಾಪುರ ತಾಲ್ಲೂಕಿನಲ್ಲಿರುವ ಒಂದು ಪುಟ್ಟ ಹಳ್ಳಿ.



## ಅಭ್ಯಾಸ

### ೧. ಒಂದೇ ವಾಕ್ಯದಲ್ಲಿ ಉತ್ತರಿಸಿ.

ಅ) ಪಾಕಿಸ್ತಾನ ಟ್ಯಾಂಕರ್‌ಗಳ ಹೆಸರೇನು?

ಆ) ಪ್ಯಾಟನ್ ಟ್ಯಾಂಕರ್‌ಗಳಿಂದ ಫಿರಂಗಿಗಳು ಸಿಡಿಯುವ ಬಗೆ ತಿಳಿಸಿ.

ಇ) ಬಲಿದಾನಕ್ಕೆ ಯಾರು ಸಿದ್ಧರಾದರು?

ಈ) ಹಮೀದ ತನ್ನ ತುಕಡಿಗೆ ನೀಡಿದ ಕೊನೆಯ ಆದೇಶವೇನು?

ಉ) ಭಾರತದ ಮೇಲೆ ಯಾರು ಯುದ್ಧ ಸಾರಿದ್ದರು?

ಊ) ಭಾರತ ಸರ್ಕಾರ ಹಮೀದನನ್ನು ಹೇಗೆ ಗೌರವಿಸಿತು?

## ೨. ಈ ಪದಗಳನ್ನು ಸ್ವಂತ ವಾಕ್ಯದಲ್ಲಿ ರಚಿಸಿರಿ.

ಅ) ಕಬಳಿಸು : ................................................................................

ಆ) ಧೂಳಿಪಟ : ................................................................................

ಇ) ಕಂಗೆಡು : ................................................................................

ಈ) ಕುಸಿದುಬೀಳು : ................................................................................

ಉ) ರೋಮಾಂಚನ : ................................................................................

## ೩. ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

ಅ) ಭಾರತದ ಸೈನಿಕರು ಏಕೆ ದಿಕ್ಕೆಟ್ಟರು? ವಿವರಿಸಿ.

ಆ) ಪ್ಯಾಟನ್ ಟ್ಯಾಂಕರ್‌ಗಳನ್ನು ನಾಶಪಡಿಸುವ ರೀತಿ ತಿಳಿಸಿರಿ.

ಇ) ಟ್ಯಾಂಕರ್‌ಗಳ ಗುರಿಯನ್ನು ಹಮೀದ ತಪ್ಪಿಸಿಕೊಂಡ ರೀತಿ ವಿವರಿಸಿ.

ಈ) ಹಮೀದ ಎಷ್ಟು ಟ್ಯಾಂಕರ್‌ಗಳನ್ನು ಸಿಡಿಸಿದ? ಹೇಗೆ?

ಉ) ಹಮೀದನ ಆರ್ಭಟಕ್ಕೆ ವೈರಿ ಪಡೆಯ ಪರಿಸ್ಥಿತಿ ಹೇಗಿತ್ತು?

ಊ) ಹಮೀದನಲ್ಲಿ ನೀವು ಮೆಚ್ಚುವ ಗುಣಗಳೇನು?

## ೪. ಸಂಬಂಧ ಪಡದ ಪದ ಹೆಕ್ಕಿ ತಗೆದು ಬರೆ.

ಅ) ಅಬ್ದುಲ್ ಹಮೀದ್, ರಾಣಾ ಪ್ರತಾಪ, ಮೀರ ಸಾದಿಕ್, ಭಗತಸಿಂಗ್ ..........................

ಆ) ಬಿಲ್ಲು-ಬಾಣ, ಕತ್ತಿ, ಬರ್ಚಿ, ಕೋವಿ(ಗನ್) ..........................

ಇ)  ಗೆಳೆಯ, ಸ್ನೇಹಿತ, ಶತ್ರು, ಸಖ ..........................

ಈ)  ಕಳ್ಳಿ, ಸೈನಿಕ, ಯೋಧ, ಪೋಲಿಸ್ ..........................

## ೫.  ಗೆರೆ ಹಾಕಿದ ಪದಗಳ ಅರ್ಥ ಬರೆಯಿರಿ.

ಅ)  ಪ್ಯಾಟನ್ ಟ್ಯಾಂಕರ್‌ಗಳು ರಭಸದಿಂದ ಮುನ್ನುಗ್ಗುತ್ತಿದ್ದವು.

ಆ)  ಪ್ಯಾಟನ್ ಟ್ಯಾಂಕರ್‌ಗೆ ಎದುರು ಬಂದದ್ದೆಲ್ಲ ಸುಟ್ಟು ಕರಕಲಾಗುತ್ತಿತ್ತು.

ಇ)  ಪ್ಯಾಟನ್ ಟ್ಯಾಂಕರ್‌ಗಳ ಆರ್ಭಟಕ್ಕೆ ಭಾರತೀಯ ಸೈನಿಕರು ದಿಕ್ಕೆಟ್ಟು ಚದುರಿದರು.

ಈ)  ಹಮೀದ ಸಾವಿನ ಸಿದ್ಧತೆಯಲ್ಲಿ ಪ್ಯಾಟನ್ ಟ್ಯಾಂಕರ್‌ಗಳನ್ನು ನಾಶಪಡಿಸಬೇಕಿತ್ತು.

ಉ)  ಹಮೀದನು ಎಸೆದ ಗ್ರೇನೇಡ್ ಧಾಳಿಗೆ ಟ್ಯಾಂಕರ್ ದೊಡ್ಡ ಶಬ್ಧ ಮಾಡಿ ಛಿದ್ರಛಿದ್ರವಾಯಿತು.

## ೬.  ಬಿಟ್ಟ ಪದ ತುಂಬಿ ವಾಕ್ಯ ಪೂರ್ಣಗೊಳಿಸು.

ಅ)  ಪ್ಯಾಟನ್ ಟ್ಯಾಂಕರ್‌ಗಳ ಎದುರು ಬಂದುದೆಲ್ಲಾ ...............................

ಆ)  ಹಮೀದ ............................... ಟ್ಯಾಂಕರ್‌ಗಳ ಗುರಿಯನ್ನು ತಪ್ಪಿಸಿಕೊಂಡು ಅತ್ತ-ಇತ್ತ ನೆಗೆದನು.

ಇ)  ಹಮೀದನ ಗ್ರೇನೇಡ್ ಎಸೆತಕ್ಕೆ ಟ್ಯಾಂಕರ್‌ಗಳು ............................... ವಾದವು.

ಈ)  ಹಮೀದನನ್ನು ............................... ತುಂಬಿಕೊಂಡಿದ್ದಳು.

ಉ)  ಹಮೀದನ ಹೋರಾಟಕ್ಕೆ ಪಾಕ್ ಸೇನೆ ...............................



## ೭.  ಟಿಪ್ಪಣಿ ಬರೆಯಿರಿ.

ಅ)  ಪ್ಯಾಟನ್ ಟ್ಯಾಂಕರ್‌ಗಳು: ..........................................................................

..........................................................................................................

..........................................................................................................

..........................................................................................................

ಆ)  ಅಬ್ದುಲ್ ಹಮೀದ : ..........................................................................

..........................................................................................................

..........................................................................................................

..........................................................................................................

೮. **ಇವುಗಳನ್ನು ಗಮನಿಸಿ ಓದಿ.**

ಅತ್ತ ಇತ್ತ , ಸುತ್ತ ಮುತ್ತ, ಮೇಲೆ ಕೆಳಗೆ – ಇಂತಹ ೩ ಪದಗಳನ್ನು ಬರೆಯಿರಿ.

೧. ........................... ೨. ........................... ೩. ...........................

೯. **ಈ ಪದಗಳನ್ನು ೫ ಸಲ ಬರೆಯಿರಿ.**

| ದಿಕ್ಕೆಟ್ಟು | ಮುನ್ನಗ್ಗು | ಸೈನ್ಯ | ಆಕ್ರಮಣ | ಶೌರ್ಯ |
|---|---|---|---|---|
| ................ | ................ | ................ | ................ | ................ |
| ................ | ................ | ................ | ................ | ................ |
| ................ | ................ | ................ | ................ | ................ |
| ................ | ................ | ................ | ................ | ................ |
| ................ | ................ | ................ | ................ | ................ |

| ಮೈನವಿರೇಳು | ಹವಾಲ್ದಾರ | ಪರಮವೀರಚಕ್ರ | ಪ್ಯಾಟನ್‌ಟ್ಯಾಂಕ್ |
|---|---|---|---|
| ........................ | ........................ | ........................ | ........................ |
| ........................ | ........................ | ........................ | ........................ |
| ........................ | ........................ | ........................ | ........................ |
| ........................ | ........................ | ........................ | ........................ |
| ........................ | ........................ | ........................ | ........................ |



೧೦. **ಈ ದೇಶಕ್ಕಾಗಿ ಪ್ರಾಣತೆತ್ತ (ಹುತಾತ್ಮ) ೫ ಜನ ಮಹನೀಯರ ಹೆಸರು ಬರೆಯಿರಿ.**

ಅ) ......................................................

ಆ) ......................................................

ಇ) ......................................................

ಈ) ......................................................

ಉ) ......................................................

## ೧೧. ಈ ಕೆಳಗಿನ ಪಾಠವನ್ನು ಓದಿ ಪ್ರಶ್ನೆಗಳಿಗೆ ಉತ್ತರಿಸು.

ಕಿತ್ತೂರು ಚೆನ್ನಮ್ಮ ಕನ್ನಡ ನಾಡಿನ ವೀರ ವನಿತೆಯರಲ್ಲಿ ಒಬ್ಬಳು. ಚೆನ್ನಮ್ಮನ ತಂದೆ ಧೂಳಪ್ಪ ದೇಸಾಯಿ. ತಾಯಿ ಪದ್ಮಾವತಿ. ಚೆನ್ನಮ್ಮ ಚಿಕ್ಕಂದಿನಲ್ಲಿಯೇ ಕತ್ತಿವರಸೆ, ಕುದುರೆ ಸವಾರಿ ಮುಂತಾದ ವಿದ್ಯೆಗಳನ್ನು ಕಲಿತಳು.

ಚೆನ್ನಮ್ಮ ಕಿತ್ತೂರು ದೊರೆ ಮಲ್ಲಸರ್ಜನೊಂದಿಗೆ ಮದುವೆಯಾದಳು. ಇದ್ದೊಬ್ಬ ಮಗ ಕಾಯಿಲೆಯಿಂದ ತೀರಿಕೊಂಡನು. ಮಲ್ಲಸರ್ಜನ ಹಿರಿಯ ಹೆಂಡತಿಯ ಮಗ ಶಿವಲಿಂಗರುದ್ರಸರ್ಜ, ತಂದೆಯ ನಂತರ ರಾಜನಾದನು. ಅವನೂ ಅನಾರೋಗ್ಯದಿಂದ ತೀರಿಕೊಂಡನು.

ಆಗ ಚೆನ್ನಮ್ಮ ಬಂಧುವಿನ ಮಗನನ್ನು ದತ್ತು ತೆಗೆದುಕೊಂಡಳು. ಅವನನ್ನು ಕಿತ್ತೂರಿನ ಉತ್ತರಾಧಿಕಾರಿಯನ್ನಾಗಿ ಮಾಡಿದಳು.

ಇದು ಆಗಿನ ಬ್ರಿಟಿಷ್ ವೈಸರಾಯಿಯಾಗಿದ್ದ ಡಾಲ್‌ಹೌಸಿಗೆ ತಿಳಿಯಿತು. “ ಈ ದತ್ತಕ ಕ್ರಮ ಕಾನೂನು ಬದ್ಧವಲ್ಲ, ಕಿತ್ತೂರು ಬ್ರಿಟಿಷರ ಅಧೀನಕ್ಕೆ ಬರಬೇಕು” ಎಂದು ಸಾರಿದನು. ಚೆನ್ನಮ್ಮ ಅವನ ಬೆದರಿಕೆಗೆ ಮಣಿಯಲಿಲ್ಲ.

ಬ್ರಿಟಿಷ್ ಅಧಿಕಾರಿ ಥ್ಯಾಕರೆ ಕಿತ್ತೂರಿನ ಮೇಲೆ ದಾಳಿ ಮಾಡಿದನು. ರಾಣಿ ಚೆನ್ನಮ್ಮ ತನ್ನ ಸೈನಿಕರನ್ನು ಹುರಿದುಂಬಿಸಿದಳು. ರಣಚಂಡಿಯಾದಳು. ಕುದುರೆಯನ್ನೇರಿ ವೀರಾವೇಶದಿಂದ ಕತ್ತಿಯನ್ನು ಝಳಪಿಸಿದಳು.

ನೂರಾರು ಬ್ರಿಟಿಷ್ ಸೈನಿಕರ ರುಂಡಗಳನ್ನು ಚೆಂಡಾಡಿದಳು. ಥ್ಯಾಕರೆಯ ತಲೆಯನ್ನು ಉರುಳಿಸಿದಳು. ಬ್ರಿಟಿಷರಿಗೆ ಸಿಂಹಸ್ವಪ್ನವಾದಳು. ಸ್ವಾತಂತ್ರ್ಯದ ಬೆಳ್ಳಿಚುಕ್ಕಿಯಾದಳು.



**ಪ್ರಶ್ನೆಗಳು :**

ಅ) ಚೆನ್ನಮ್ಮ ಬಾಲ್ಯದಲ್ಲಿ ಯಾವ ವಿದ್ಯೆಗಳನ್ನು ಕಲಿತಳು?

..........................................................................................

ಆ) ಬ್ರಿಟಿಷರು ಕಿತ್ತೂರಿನ ಮೇಲೆ ಏಕೆ ಯುದ್ಧ ಸಾರಿದರು?

..........................................................................................

ಇ) ಚೆನ್ನಮ್ಮ ಥ್ಯಾಕರೆಯೊಡನೆ ಯುದ್ಧ ಮಾಡಿದ ರೀತಿಯನ್ನು ವಿವರಿಸಿ.

..........................................................................................



## ಗದ್ಯ ಪಾಠ – ೮

# ರಜೆಯ ಪತ್ರ

ತುಮಕೂರು

ದಿನಾಂಕ : ೨೫–೧೧–೨೦೧೩

ಮಾನ್ಯ ವರ್ಗಶಿಕ್ಷಕರಿಗೆ,
೫ನೇ ತರಗತಿ,
ವಿದ್ಯಾಭಾರತಿ ಪ್ರಾಥಮಿಕ ಶಾಲೆ,
ತುಮಕೂರು.

ಮಾನ್ಯರೆ,

ವಿಷಯ : ಎರಡು ದಿನ ರಜೆಗಾಗಿ ವಿನಂತಿ.

ನಾನು ರಾಧ ವಿನಂತಿಸುವುದು ಏನೆಂದರೆ, ನನ್ನ ಚಿಕ್ಕಪ್ಪನ ಮದುವೆಯಿದೆ. ಮನೆಗೆ ಎಲ್ಲ ಬಂಧುಗಳೂ ಆಗಮಿಸಿದ್ದಾರೆ. ಮದುವೆಯ ಸಮಾರಂಭದಲ್ಲಿ ನಾನೂ ಭಾಗವಹಿಸಲು ಆಸೆ ಪಡುತ್ತಿರುವೆ. ಕಾರಣ ನನಗೆ ದಿನಾಂಕ : ೨೫ ಮತ್ತು ೨೬ರಂದು ಎರಡು ದಿನ ರಜೆಯನ್ನು ನೀಡಬೇಕು ಎಂದು ಕೋರಿಕೆ.

ವಂದನೆಗಳೊಂದಿಗೆ,

ತಮ್ಮ ವಿಧೇಯ ವಿದ್ಯಾರ್ಥಿನಿ

ರಾಧಾ ತಂ/ ಸುನೀಲಕುಮಾರ
೫ನೇ ತರಗತಿ

ಪಾಲಕರ ಸಹಿ
(ಸುನೀಲಕುಮಾರ)

## ಶೈಕ್ಷಣಿಕ ಪ್ರವಾಸಕ್ಕೆ ಹೋಗಲು ತಂದೆಯ ಅನುಮತಿ ಕೋರಿ ಪತ್ರ

ಶಿವಮೊಗ್ಗ
ದಿನಾಂಕ: ೨೫-೧೧-೨೦೧೩

ಪೂಜ್ಯ ಶ್ರೀ ತಂದೆಯವರಿಂದ
ನಿಮ್ಮ ಮಗಳಾದ ಶಿವಲೀಲಾಳು ಬೇಡಿಕೊಳ್ಳುವ ಆಶೀರ್ವಾಧಗಳು

ನಾನು ಇಲ್ಲಿ ಕ್ಷೇಮವಾಗಿರುವೆ. ತಮ್ಮ ಕ್ಷೇಮ ತಿಳಿಸಿರಿ. ಪ್ರಥಮ ಹಂತದ ಪರೀಕ್ಷೆಯಲ್ಲಿ ಎ+ ಗಳಿಸಿರುವೆ. ಕಳೆದ ವರುಷಕ್ಕಿಂತ ಈ ವರುಷದ ಸಾಧನೆ ಚೆನ್ನಾಗಿದೆ ಎಂದು ಗುರುಗಳು ಹೇಳಿದರು. ಈಗ ಪರೀಕ್ಷೆಗಾಗಿ ಸಿದ್ಧತೆ ನಡೆಸಿರುವೆ. ಚೆನ್ನಾಗಿ ಅಭ್ಯಾಸ ಮಾಡುತ್ತಿರುವೆ.

ಡಿಸೆಂಬರ ತಿಂಗಳಲ್ಲಿ ನಮ್ಮ ಶಾಲೆಯ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಪ್ರವಾಸವನ್ನು ಏರ್ಪಡಿಸಿದ್ದಾರೆ. ಅದು ಹಂಪೆಗೆ ! ಅಪ್ಪಾಜಿ, ಹಂಪೆಯನ್ನು ನೋಡಲು ನನಗೆ ಬಲು ಆಸೆ. ವಿಜಯನಗರ ಸಾಮ್ರಾಜ್ಯದ ಬಗ್ಗೆ ಬಹಳಷ್ಟು ಕೇಳಿದ್ದೇನೆ. ಆಗಿನ ಕಾಲದ ಪರದೇಶದ ಪ್ರವಾಸಿಗರೂ ಬಹಳಷ್ಟು ಹೊಗಳಿದ್ದಾರೆ. ಆ ಮಹಾ ಸಾಮ್ರಾಜ್ಯದ ಅವಶೇಷಗಳನ್ನು ನೋಡಲೇಬೇಕೆಂಬ ಬಯಕೆ.

ಪ್ರವಾಸದ ವೆಚ್ಚವಾಗಿ ಪ್ರತಿ ವಿದ್ಯಾರ್ಥಿಗೆ ೫೦೦ರೂ.ಗಳನ್ನು ನಿಗದಿಪಡಿಸಲಾಗಿದೆ. ಪ್ರವಾಸದ ಶುಲ್ಕ ೫೦೦ರೂ ಮತ್ತು ನನ್ನ ಇತರ ಖರ್ಚು ೧೦೦ ಒಟ್ಟು ೬೦೦ರೂ.ಗಳನ್ನು ನನಗೆ ಕಳುಹಿಸಿಕೊಡಿರಿ.

ಮನೆಯಲ್ಲಿ ಮಾತೃಶ್ರೀಯವರಿಗೆ ನಮಸ್ಕಾರಗಳನ್ನು ತಿಳಿಸಿರಿ. ಪುಟ್ಟ ತಂಗಿಗೆ ಶುಭ ಹಾರೈಕೆಗಳು.

ಇಂತಿ ನಿಮ್ಮ ಪ್ರೀತಿಯ ಮಗಳು
ಶೀವಲೀಲಾ

ಗೆ,
ಶ್ರೀ ಶರಣಪ್ಪ ಬಡಿಗೇರ
ಮ.ಸಂ.೫-೮-೨೩೪
ಪೋ.ಕೊರ್ತಕುಂದ
ತಾ.ರಾಯಚೂರು








## ಅಭ್ಯಾಸ

೧. ಪಠ್ಯದಲ್ಲಿರುವ ಮಾದರಿ ಪತ್ರವನ್ನು ಸರಿಯಾಗಿ ಗಮನಿಸಿ. ಇಲ್ಲಿ ಎರಡು ಪತ್ರಗಳಿವೆ. ಒಂದು ಖಾಸಗಿ ಪತ್ರ. ಇನ್ನೊಂದು ಸರ್ಕಾರಿ/ಇತರ ಸಂಸ್ಥೆಗಳಿಗೆ ವ್ಯವಹಾರಿಕ ಪತ್ರ.

**ಖಾಸಗಿ ಪತ್ರ : ಹಿರಿಯರಿಗೆ, ಕಿರಿಯರಿಗೆ ಬಂಧುಗಳಿಗೆ ಸ್ನೇಹಿತರಿಗೆ ಬರೆಯುವ ಪತ್ರಗಳು :**

**ಬರೆಯುವವರ ವಿಳಾಸ;**

ಪತ್ರ ಅಥವಾ ಕಾಗದದ ಬಲಗಡೆ ಕೊನೆಯಲ್ಲಿ ಬರೆಯುವವರ ವಿಳಾಸ, ಊರು ಮತ್ತು ದಿನಾಂಕ ನಮೂದಿಸಬೇಕು.

| ಸಂಬೋಧನೆ ಸಂಬಂಧಿಸಿದವರಿಗೆ | ಸಂಬೋಧಿಸುವಾಗ ಬಳಸುವ ಒಕ್ಕಣಿಕೆ | ಗೌರವ ಸಲ್ಲಿಸುವ ಒಕ್ಕಣಿಕೆ |
|---|---|---|
| ತಂದೆಯವರಿಗೆ | ಪೂಜ್ಯ ಶ್ರೀ ತಂದೆಯವರಿಗೆ | ಶಿರ ಸಾಷ್ಟಾಂಗ ನಮಸ್ಕಾರಗಳು. |
| | ಅಥವಾ ತೀರ್ಥರೂಪರವರಲ್ಲಿ | ಶರಣು ಶರಣಾರ್ಥಿಗಳು |
| ತಾಯಿಯವರಿಗೆ | ಪೂಜ್ಯ ಮಾತೃಶ್ರೀ ಅವರಿಗೆ | ಶಿರಸಾಷ್ಟಾಂಗ ನಮಸ್ಕಾರಗಳು |
| ಅಣ್ಣನಿಗೆ | ಪೂಜ್ಯ ಅಣ್ಣನವರಿಗೆ | ನಮಸ್ಕಾರಗಳು |
| ಅಕ್ಕನಿಗೆ | ಪೂಜ್ಯ ಸಹೋದರಿಗೆ | ವಂದನೆಗಳು |
| ಸ್ನೇಹಿತರಿಗೆ | ಆತ್ಮೀಯ ಪ್ರಿಯಮಿತ್ರನಿಗೆ | ವಂದನೆಗಳು |
| ಚಿಕ್ಕವರಿಗೆ/ತಮ್ಮ | ಆತ್ಮೀಯ ಸಹೋದರನಿಗೆ | ಶುಭಾಶಯಗಳು |
| ತಂಗಿ | ಆತ್ಮೀಯ ಸಹೋದರಿಗೆ | ಆಶೀರ್ವಾದಗಳು |



**ಪತ್ರದ ಒಡಲು** : ಇಲ್ಲಿ ತಮ್ಮ ಬೇಡಿಕೆಯ ವಿವರ ಅಥವಾ ಉದ್ದೇಶ ಕಾರಣ ಸಹಿತವಾಗಿ ಬರೆಯಿರಿ.

**ಪತ್ರದ ಮುಕ್ತಾಯ** : ತಂದೆ ತಾಯಿ ಹಿರಿಯರಿಗೆ : ತಮ್ಮ ಶುಭಾಶಯ ಕೋರಿ ಎಂದು ಬರೆದು ಸಹಿ ಮಾಡಬೇಕು. ಸಹಿಯ ಕೆಳಗೆ ಹೆಸರಿದ್ದರೆ ಒಳ್ಳೆಯದು.

**ಸ್ನೇಹಿತರಿಗೆ** : ವಂದನೆಗಳೊಂದಿಗೆ ತಮ್ಮ ಸ್ನೇಹಿತ

**ಕಿರಿಯರಿಗೆ** : ಶುಭಾಶಯಗಳೊಂದಿಗೆ

ನಿಮ್ಮ ಅಣ್ಣ, ನಿನ್ನ ಅಕ್ಕ, ಸಹಿ ಹಾಗೂ ಹೆಸರು

## ಸರ್ಕಾರಿ ಅಧಿಕಾರಿಗಳಿಗೆ/ ಸಂಸ್ಥೆಗಳಿಗೆ ಬರೆಯುವ ಪತ್ರದಲ್ಲಿ ಗಮನಿಸಬೇಕಾದ ಅಂಶಗಳು.

೧. **ವಿಳಾಸ ಮತ್ತು ದಿನಾಂಕ** : ಕಾಗದದ ಬಲಭಾಗದ ಕೊನೆಯ ಮೂಲೆಯಲ್ಲಿ ಪತ್ರ ಬರೆಯುವವರ ವಿಳಾಸ ಹಾಗೂ ದಿನಾಂಕ ಬರೆಯಬೇಕು.

೨. **ಪತ್ರ ಸಂಭೋದನೆ** : ಯಾರಿಗೆ ಬರೆಯಬೇಕಾಗಿದೆಯೋ ಅವರ ವಿಳಾಸ ಮತ್ತು ಹುದ್ದೆ.

ಮಾದರಿ : ಮಾನ್ಯ ಜಿಲ್ಲಾಧಿಕಾರಿಗಳು, ರಾಯಚೂರು ಅವರಿಗೆ **ಅಥವಾ**

ಮಾದರಿ : ಮಾನ್ಯ ಮುಖ್ಯೋಪಾಧ್ಯಾಯರು, ಕೆ.ಪಿ.ಸಿ. ಪ್ರೌಢಶಾಲೆ ಶಕ್ತಿನಗರ, ಮಂಗಳೂರು.

೧. **"ಮಾನ್ಯರೆ'** : ಮಾನ್ಯರೆ–ಎಂದು ಸಂಬೋಧಿಸಬೇಕು: ಇದು ಗೌರವ ಸಂಭೋದನೆ ನಮಸ್ಕಾರ ಎಂಬರ್ಥದಲಿ ಗೌರವ ನೀಡಿದಂತೆ ಆಗುತ್ತದೆ.

೨. **ವಿಷಯ** : ನಿಮ್ಮ ಪತ್ರದ ವಿಷಯ ಅಥವಾ ಕಾರಣದ ಸಂಕ್ಷಿಪ್ತ ರೂಪ ಅಥವಾ ಉದ್ದೇಶ ಒಂದೇ ಸಾಲಿನಲ್ಲಿ ಬರೆಯಬೇಕು.

**ಒಡಲು** : ಇಲ್ಲಿ ತಮ್ಮ ಬೇಡಿಕೆಯ ವಿವರ ಅಥವಾ ಉದ್ದೇಶ ಕಾರಣ ಸಹಿತವಾಗಿ ಬರೆಯಬೇಕು.

**ಮುಕ್ತಾಯ** : ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ
ಸಹಿ
(ಹೆಸರು)

**ವಿಳಾಸ ಬರೆಯುವ ರೀತಿ** : ಲಕೋಟೆಯ ಮೇಲೆ ಈ ರೀತಿ ಬರೆಯಬೇಕು.

**ಗೆ,**
**ಮಾನ್ಯ ಜಿಲ್ಲಾಧಿಕಾರಿಗಳು**
**ಬಿಜಾಪುರ**
**ಪಿನ್ ಕೋಡ: ೫೮೬೧೦೧**

೩. **ಅಭ್ಯಾಸ ಚಟುವಟಿಕೆ** : ನಿಮ್ಮ ನಗರಸಭೆ ಅಧ್ಯಕ್ಷರಿಗೆ ನಿಮ್ಮ ಓಣಿಯಲ್ಲಿ ಬೀದಿ ದೀಪ ಅಳವಡಿಸಲು ಕೋರಿ ಪತ್ರ ಬರೆಯಿರಿ.





## ಪದ್ಯ ಪಾಠ – ೯

# ಜಾನಪದ

### ಮಗು

ಹಾಲ್ಬೇಡಿ ಅತ್ತಾನ, ಕೋಲ್ಬೇಡಿ ಕುಣಿದಾನ
ಮೊಸರ್ಬೇಡಿ ಕೆಸರ ತುಳಿದಾನ ।
ಕಂದಯ್ಯನ
ಕುಸುಲದ ಗೆಜ್ಜೆ ಕೆಸರಾಯ್ತು ॥



### ಚಂದ

ಹಾವಿನ ಹೆಡೆಚೆಂದ, ಮಾವಿನ ಮಿಡಿಚೆಂದ
ಹಾರಾಡಿ ಬರುವ ಗಿಳಿ ಚೆಂದ । ಕಂದಯ್ಯ
ನೀ ಚೆಂದ ನಮ್ಮ ಮನಿಗೆಲ್ಲ ॥

### ಹರಕೆ

ಎಲ್ಲಾದರೂ ಇರಲವ್ವ, ಹುಲ್ಲಾಗಿ ಬೆಳೆಯಲಿ
ನೆಲ್ಲಿ ಬಡ್ಡ್ಯಾಗಿ ಚಿಗಿಯಲಿ । ನನಕಂದ
ಜಯವಂತನಾಗಿ ಬೆಳೆಯಲಿ ॥



### ಓದಿ –ತಿಳಿ

ಕುಸುಲ – ಸೂಕ್ಷ್ಮ ಕೆತ್ತನೆ, ಚಿತ್ತಾರ, ಚಿಗಿಯಲಿ– ಚಿಗುರಲಿ, ಜಯ– ಗೆಲುವು

### ಗಮನಿಸಿ–ತಿಳಿ

ನೆಲ್ಲಿಬಡ್ಡಿ – ನೆಲ್ಲಿಮರದ ಕಾಂಡ ಕತ್ತರಿಸಿದಷ್ಟು ಅಗಲವಾಗಿ ಟಿಸಿಲೊಡೆದು ಚಿಗುರುವುದು.
ಹುಲ್ಲಾಗಿ ಬೆಳೆ – ಜೋರಾದ ಗಾಳಿಗೂ, ಮಳೆಗೂ ಸಾಯದೆ ಯಾವಾಗಲೂ ಹಸಿರಾಗಿಯೇ ಇರುವುದು ಹುಲ್ಲು.

## ಅಭ್ಯಾಸ

**೧. ಒಂದು ವಾಕ್ಯದಲ್ಲಿ ಉತ್ತರಿಸಿರಿ.**

ಅ) ಮಗು ಏನು ಬೇಕೆಂದು ಅಳುತ್ತಿರುವುದು ?
ಆ) ಯಾವುದಕ್ಕಾಗಿ ಮಗು ಹಟ ಮಾಡುವುದು?

ಇ) ಕಂದನ ಕುಸುಲದ ಗೆಜ್ಜೆ ಏಕೆ ಕೆಸರಾಯ್ತು ?

ಉ) ಯಾವುದರ ಹೆಡೆ ಚಂದ ?

ಊ) ಗಿಳಿ ಯಾವಾಗ ಸುಂದರವಾಗಿ ಕಾಣುತ್ತದೆ ?

ಋ) ಮನೆಗೆ ಏನಿದ್ದರೆ ಚಂದ ?

ಎ) ತನ್ನ ಕಂದ ಹೇಗೆ ಬೆಳೆಯಲಿ ಎಂದು ತಾಯಿ ಆಸೆ ಪಡುವಳು ?

## ೨. ಎರಡು/ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

ಅ) ಕಂದಯ್ಯನ ಗೆಜ್ಜೆ ಕೆಸರಾಗಲು ಕಾರಣವೇನು?

ಆ) ತಾಯಿ ತನ್ನ ಕಂದ 'ನೆಲ್ಲಿ ಬಡ್ಡ್ಯಾಗಿ ಚಿಗಿಯಲಿ' ಎಂದು ಹೇಳುವ ಸಾಲಿನ ಅರ್ಥವೇನು?

## ೩. ಬಿಟ್ಟ ಪದ ತುಂಬಿರಿ.

ಅ) ಕಂದಯ್ಯನ ...................... ಕೆಸರಾಯ್ತು.

ಆ) ಮಾವಿನ ...................... ಚಂದ

ಇ) ನನ ಕಂದ ...................... ನಾಗಿ ಬೆಳೆಯಲಿ.

ಈ) ನೀ ಚಂದ ನಮ್ಮ ......................



## ೪. ಈ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿರಿ.

ಅ) ಅಳು : ..........................................................................................

ಆ) ಕುಣಿ : ..........................................................................................

ಇ) ತುಳಿ : ..........................................................................................

ಈ) ಚೆಂದ : ..........................................................................................

ಉ) ಚಿಗಿ : ..........................................................................................

## ೫. ಈ ಪ್ರಶ್ನೆಗಳಿಗೆ ಉತ್ತರಿಸಿರಿ.

ಅ) ಕಂದಯ್ಯನ ಕುಸುಲದ ಗೆಜ್ಜೆ ಕೆಸರಾಗಲು ಕಾರಣಗಳೇನು?

..........................................................................................

..........................................................................................

ಆ) ಕಂದಯ್ಯ ಮನೆಗೆ ಚಂದ ಎನ್ನಲು ಜಾನಪದರು ಕೊಟ್ಟ ಹೋಲಿಕೆಗಳನ್ನು ಬರೆಯಿರಿ

..............................................................................................

..............................................................................................

ಇ) ತಾಯಿ ತನ್ನ ಕಂದನಿಗೆ ನೀಡುವ ಹಾರೈಕೆಯನ್ನು ಅವಳ ಮಾತಿನಲ್ಲಿಯೇ ಹೇಳಿರಿ.

..............................................................................................

..............................................................................................

## ೬. ಹೊಂದಿಸಿ ಬರೆಯಿರಿ.

| ಅ | ಆ | |
|---|---|---|
| ಅ) ಹಾವಿನ ಹೆಡೆ | ೧) ಕೆಸರಾಯ್ತು | ........................ |
| ಆ) ಹಾಲ್ಬೇಡಿ | ೨) ಕೆಸರ ತುಳಿದಾನ | ........................ |
| ಇ) ಕೋಲ್ಬೇಡಿ | ೩) ಚಂದ | ........................ |
| ಈ) ಮೊಸರ್ಬೇಡಿ | ೪) ನಕ್ಕಾನ | ........................ |
| ಉ) ಕುಸುಲದ ಗೆಜ್ಜೆ | ೫) ಅತ್ತಾನ | ........................ |
| | ೬) ಕುಣಿದಾನ | ........................ |



## ೭. ಹೊಸಗನ್ನಡ ರೂಪದಲ್ಲಿ ಬರೆದಿದೆ ಗಮನಿಸಿ.

| ಜಾನಪದ | ಹೊಸಗನ್ನಡ |
|---|---|
| ಎಲ್ಲಾದರು | ಎಲ್ಲಿಯಾದರೂ |
| ತುಳದಾನ | ತುಳಿದಿದ್ದಾನೆ |
| ಬಡ್ಡ್ಯಾಗಿ | ಬೊಡ್ಡೆಯಾಗಿ |
| ಇರಲವ್ವ | ಇರಲಿ ಅವ್ವ |

## ೮. ಈ ಪದಗಳನ್ನು ಬಿಡಿಸಿ ಬರೆದಿದೆ. ಗಮನಿಸಿ ಓದಿರಿ.

ಹಾಲ್ಬೇಡಿ = ಹಾಲನ್ನು + ಬೇಡಿ    ಕೋಲ್ಬೇಡಿ = ಕೋಲನ್ನು + ಬೇಡಿ

ಮೊಸರ್ಬೇಡಿ = ಮೊಸರನ್ನು + ಬೇಡಿ    ಕೆಸರಾಯ್ತು = ಕೆಸರು + ಆಯ್ತು

## ೯. ಮಾದರಿಯಂತೆ ಪದಗಳನ್ನು ರಚಿಸಿರಿ.

**ಮಾದರಿ : ಜಯವನ್ನು ಹೊಂದಿದವ = ಜಯವಂತ**

ಮಾನವನ್ನು ಹೊಂದಿದವ = ..........................................................

ಹಣವನ್ನು ಹೊಂದಿದವ = ..........................................................

ಗುಣವನ್ನು ಹೊಂದಿದವ = ..........................................................

## ೧೦. ಈ ಪದ್ಯವನ್ನು ಪೂರ್ಣಗೊಳಿಸಿ, ಕಂಠಪಾಠ ಮಾಡಿರಿ.

ಎಲ್ಲಾದರೂ ................................

................................................

................................ ಬೆಳೆಯಲಿ.

## ೧೧. ಚಟುವಟಿಕೆ : ಈ ತ್ರಿಪದಿಗಳನ್ನು ಓದಿ.

ಅ) **ನಡೆವುದೊಂದೆ ಭೂಮಿ। ಕುಡಿವುದೊಂದೆ ನೀರು**
**ಸುಡುವಗ್ನಿಯೊಂದೆ ಇರುತಿರಲು ಕುಲಗೋತ್ರ**
**ನಡುವೆ ಎತ್ತಣದು ? ಸರ್ವಜ್ಞ॥**

**ಭಾವಾರ್ಥ:** ಎಲ್ಲರೂ ನಡೆಯುವ ಈ ಭೂಮಿಯು ಒಂದೇ. ಎಲ್ಲರೂ ಕುಡಿಯುವ ನೀರು ಒಂದೇ. ಸುಡುವ ಅಗ್ನಿಯು ಒಂದೇ–ಹೀಗಿರಲಾಗಿ ಕುಲ, ಗೋತ್ರ, ಜಾತಿ, ಮತಗಳು ಎಲ್ಲಿಂದ ಬಂದಂತಹವು? ಅವನ್ನು ನಾವೇ ಸೃಷ್ಟಿಸಿಕೊಂಡಿದ್ದೇವೆ. ಅದಕ್ಕೆ ಅರ್ಥವಿಲ್ಲ. ಎಂದು ಜಾತಿ ಭೇದವನ್ನು ಸರ್ವಜ್ಞ ತಿರಸ್ಕರಿಸುತ್ತಾನೆ.

ಆ) **ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ**
**ದುರ್ಜನರ ಸಂಗದೊಡನಾಟ ಬಚ್ಚಲಿನ**
**ರೊಚ್ಚಿನಂತಹುದು ಸರ್ವಜ್ಞ॥**

**ಭಾವಾರ್ಥ:** ಒಳ್ಳೆಯ ಜನರ ಸಹವಾಸವು ಜೇನತುಪ್ಪವನ್ನು ತಿಂದಂತೆ, ಸಿಹಿಯಾಗಿ ರುಚಿಯಾಗಿರುವುದು. ಆದರೆ ದುಷ್ಟ ಜನರ ಸಹವಾಸವು ಬಚ್ಚಲಿಂದ ಹರಿಯುವ ಹೊಲಸು ರಾಡಿ ನೀರಿನಂತೆ ಕೆಟ್ಟದಾಗಿರುತ್ತದೆ. ಅದಕ್ಕಾಗಿ ಸಜ್ಜನರ ಸಂಗಮಾಡು ಎಂದು ಸರ್ವಜ್ಞ ಹೇಳುತ್ತಾನೆ.

## (ಅ) ಶ್ರವಣಕುಮಾರ



ಕಾಡು, ಸುತ್ತಲು ಗಿಡಮರಬಳ್ಳಿ. ಅದರ ನಡುವೆ ಒಂದು ಪುಟ್ಟ ಕುಟೀರ. ಅಲ್ಲಿ ತಾಂಡವ ಋಷಿ ತಮ್ಮ ಪತ್ನಿಯೊಂದಿಗೆ ವಾಸವಾಗಿದ್ದರು. ಅವರಿಗೆ ಒಬ್ಬನೇ ಮಗ. ಅವನ ಹೆಸರು ಶ್ರವಣಕುಮಾರ. ಅವರಿಗೆ ಮುಪ್ಪು ಆವರಿಸಿತ್ತು. ಪುಣ್ಯ ಕ್ಷೇತ್ರಗಳಿಗೆ ಹೋಗಬೇಕು, ತೀರ್ಥ ಸ್ನಾನ ಮಾಡಬೇಕು ಎಂದು ಅವರು ಚಡಪಡಿಸುತ್ತಿದ್ದರು. ಆದರೆ ಅವರಿಗೆ ಕಣ್ಣು ಕಾಣುತ್ತಿರಲಿಲ್ಲ.

ಶ್ರವಣಕುಮಾರನಿಗೆ ತಂದೆ–ತಾಯಿಗಳ ಮೇಲೆ ಅಪಾರ ಪ್ರೀತಿ. ಶ್ರವಣಕುಮಾರ ಅವರ ಆಸೆಯನ್ನು ಅರಿತನು. ಅವರಿಗೆ ಹೇಗಾದರೂ ಮಾಡಿ ತೀರ್ಥಯಾತ್ರೆ ಮಾಡಿಸಬೇಕೆಂದು ಯೋಚಿಸತೊಡಗಿದ. ಈ ಮುದುಕರನ್ನು ಕಾವಡಿಯಲ್ಲಿ ಕುಳ್ಳಿರಿಸಿ ಕರೆದೊಯ್ಯುವ ಉಪಾಯ ಹೊಳೆಯಿತು. ಉದ್ದನೆಯ ಗಟ್ಟಿ ಬಿದಿರು ತಗೆದುಕೊಂಡನು. ಎರಡು ಬದಿಯಲ್ಲಿ ತಕ್ಕಡಿಯಂತೆ ಬುಟ್ಟಿಗಳನ್ನು ಕಟ್ಟಿದ. ಅದೇ ಕಾವಡಿ. ಅದರಲ್ಲಿ ತಂದೆ–ತಾಯಿಗಳನ್ನು ಕೂಡಿಸಿದ. ಕಾವಡಿಯನ್ನು ಹೆಗಲ ಮೇಲೆ ಹೊತ್ತು ನಿಂತ. ಅವರ ಆಸೆ ಪೂರೈಸಲು ಹೊರಟೇ ಬಿಟ್ಟನು !

ಮಾರ್ಗ ಮಧ್ಯದಲ್ಲಿ ಅವರಿಗೆ ಹಣ್ಣುಗಳನ್ನು ತಂದುಕೊಡುತ್ತಿದ್ದ. ಬಾಯಾರಿದರೆ ನೀರನ್ನು ತರುತ್ತಿದ್ದ, ಆಯಾಸವರಿತು ವಿಶ್ರಮಿಸಲು ವ್ಯವಸ್ಥೆ ಮಾಡುತ್ತಿದ್ದನು. ಹೀಗೆ ತಂದೆ ತಾಯಿಯರನ್ನು ಹೊತ್ತು ನಡೆಯುತ್ತಲೇ ಇದ್ದ. ಅನೇಕ ಕಾಡು, ಗುಡ್ಡ, ನದಿಗಳನ್ನು ದಾಟುತ್ತ ಪುಣ್ಯ ಕ್ಷೇತ್ರಗಳಿಗೆ ಕರೆದೊಯ್ದನು. ಅವನ ಹೆತ್ತವರು ಇಂತಹ ಮಗನನ್ನು ಪಡೆದುದಕ್ಕೆ ಅಭಿಮಾನ ಪಡುತ್ತಿದ್ದರು.

ಒಂದು ದಿನ ದಟ್ಟ ಕಾಡಿನಲ್ಲಿ ನಡೆಯುತ್ತಿದ್ದನು. "ಮಗು , ಹತ್ತಿರದಲ್ಲಿ ಎಲ್ಲಿಯಾದರೂ ನೀರಿದೆಯಾ? ನೋಡು" ಎಂದು ತಂದೆ ಕೇಳಿದರು. ಶ್ರವಣಕುಮಾರ ಕಾವಡಿಯನ್ನು ಇಳಿಸಿದನು. ವಿಶ್ರಮಿಸಲು ಕೇಳಿಕೊಂಡನು. ಕೈಯಲ್ಲಿ ತತ್ರಾಣಿಯನ್ನು ಹಿಡಿದು ನೀರನ್ನು ಅರಸುತ್ತ ಹೊರಟನು. ದೂರದಲ್ಲಿ ಸರೋವರ ಕಾಣಿಸಿತು. ಅತ್ತ ಕಡೆಗೆ ದಾಪುಗಾಲು ಹಾಕಿದನು. ತತ್ರಾಣಿಯಲ್ಲಿ ನೀರು ತುಂಬಲು ಮುಂದಾದನು. ನೀರು "ಬುಳು ಬುಳು ಬುಳು" ಶಬ್ದ ಮಾಡುತ್ತ ತುಂಬ ತೊಡಗಿತು.

ಇತ್ತ ಅಯೋಧ್ಯೆಯ ಮಹಾರಾಜ ದಶರಥ ಕಾಡಿಗೆ ಬೇಟೆಗಾಗಿ ಬಂದಿದ್ದನು. ಪ್ರಶಾಂತ ಪರಿಸರದಲ್ಲಿ 'ಬುಳು ಬುಳು' ಶಬ್ದ ಕೇಳಿದ. ದಿಗ್ಗನೆ ಎದ್ದು ನಿಂತನು. ಯಾವುದೋ ಕಾಡುಪ್ರಾಣಿ ನೀರು ಕುಡಿಯುವ ಶಬ್ದವೆಂದು ಭಾವಿಸಿದನು. ಕೂಡಲೇ ಶಬ್ದವೇಧಿ ಬಾಣವನ್ನು ಬಿಟ್ಟನು. ತಕ್ಷಣವೇ 'ಅಯ್ಯೋ! ಅಮ್ಮಾ ! ನಾನು ಸತ್ತೆ' ಎನ್ನುವ ಚೀತ್ಕಾರ ಕೇಳಿ ಬಂತು. ಏನೋ ಅನರ್ಥವಾಯಿತು ಎಂದು ದಶರಥ ರಾಜನು ಗಾಬರಿಗೊಂಡನು. ಬಾಣ ಬಿಟ್ಟ ದಿಕ್ಕಿನ ಕಡೆಗೆ ಓಡಿದ. ಅಲ್ಲಿ ಮುನಿಕುಮಾರನೊಬ್ಬ ರಕ್ತದ ಮಡುವಿನಲ್ಲಿ ಬಿದ್ದು ವಿಲವಿಲನೆ ಒದ್ದಾಡುತ್ತಿದ್ದನು. ಬಾಣ ಮುನಿಕುಮಾರನ ಎದೆಯನ್ನು ಸೀಳಿತ್ತು. ಅದನ್ನು ಕಂಡು ರಾಜನಿಗೆ ದಿಕ್ಕೇ ತೋಚದಂತಾಯಿತು.

ಮಹಾರಾಜನು ಆ ಮುನಿಕುಮಾರನ ಬಳಿಗೆ ಓಡಿ ಬಂದನು. ತಾನು ಕಾಡು ಪ್ರಾಣಿ ಎಂದು ಭಾವಿಸಿ ಬಾಣ ಬಿಟ್ಟಿದ್ದು ತಪ್ಪಾಯಿತು. ಕ್ಷಮಿಸಬೇಕೆಂದು ಗೋಗರೆದ. ಆಗ ಶ್ರವಣಕುಮಾರ "ನನ್ನ ಮುಪ್ಪಿನತಂದೆ-ತಾಯಿಗಳಿಗೆ ಇನ್ನಾರುಗತಿ? ಅವರ ತೀರ್ಥಯಾತ್ರೆಯನ್ನು ಇನ್ನಾರು ನಡೆಸಿಕೊಡುವರು? ಯಾವ ತಪ್ಪಿಗೆ ನನಗೀ ಶಿಕ್ಷೆ?" ಎಂದು ರೋಧಿಸಿದನು.

ದಶರಥನಿಗೆ ತನ್ನ ತಪ್ಪಿನ ಅರಿವಾಯಿತು. ತನ್ನಿಂದಾಗಿ ವಯಸ್ಸಾದ ಜೀವಿಗಳಿಗೆ ಕಷ್ಟಬಂತಲ್ಲ ಎಂದು ದುಃಖಿಸಿದನು. ಆಗ ಶ್ರವಣಕುಮಾರನು ದಶರಥ ಮಹರಾಜನನ್ನು ಸಮಾಧಾನ ಪಡಿಸಿ, ತನ್ನ ತಂದೆ ತಾಯಿಗಳ ಪರಿಸ್ಥಿತಿಯನ್ನು ವಿವರಿಸಿದನು. ಮಹಾರಾಜನು ಅವರ ಆಸೆಯನ್ನು ಪೂರೈಸುವುದಾಗಿ ಭರವಸೆ ನೀಡಿದನು. ತನ್ನ ಹೆತ್ತವರ ಆಸೆಯನ್ನು ಪೂರೈಸುವಂತೆ ಹೇಳುತ್ತಾ, ಆ ತರುಣ ಪ್ರಾಣ ಬಿಟ್ಟನು.

ದಶರಥ ಮಹಾರಾಜ ಭಾರವಾದ ಮನಸ್ಸಿನಿಂದ ಆ ವೃದ್ಧ ತಂದೆ ತಾಯಿಗಳ ಬಳಿಗೆ ಬಂದನು. ರೋಧಿಸುತ್ತಾ ವಿಷಯ ತಿಳಿಸಿದನು. ತಂದೆ ತಾಯಿಗಳು ಆಘಾತಗೊಂಡರು. ಅತ್ತರು. ತಮ್ಮ ಮಗನ ಸಾವಿಗೆ ಕಾರಣರಾದವರನ್ನು ಶಪಿಸಿದರು. ಮಗನನ್ನು ಬಿಟ್ಟಿರಲಾರದೆ ಅವರೂ ಪ್ರಾಣ ಬಿಟ್ಟರು.



## (ಆ) ಬಕಾಸುರನ ವಧೆ

ಪಾಂಡವರು ಅರಗಿನ ಅರಮನೆಯ ಬೆಂಕಿಯಿಂದ ಪಾರಾದರು. ಏಕಚಕ್ರ ಎಂಬ ಊರಿಗೆ ಬಂದರು. ಅದೊಂದು ಅಗ್ರಹಾರ. ಅಲ್ಲಿ ಬ್ರಾಹ್ಮಣನೊಬ್ಬನ ಮನೆಯ ಪಕ್ಕದಲ್ಲಿ ವಾಸಿಸತೊಡಗಿದರು. ಒಂದುದಿನ ಆ ಬ್ರಾಹ್ಮಣರ ಮನೆಯಿಂದ ಜೋರಾಗಿ ಅಳುವ ಧ್ವನಿ ಕೇಳಿಸಿತು. ಕುಂತಿ ಏನೆಂದು ವಿಚಾರಿಸಲು ಹೋದಳು. ಆ ಊರಿನ ಸಮೀಪದ ಬೆಟ್ಟದಲ್ಲಿ ಬಕಾಸುರನೆಂಬ ರಾಕ್ಷಸನು ವಾಸವಾಗಿದ್ದನು. ಅವನಿಗೆ ಹಸಿವಾದಾಗ ಊರಿನೊಳಗೆ ನುಗ್ಗಿ ಸಿಕ್ಕ ಸಿಕ್ಕ ಜನರನ್ನು ಕೊಂದು ತಿನ್ನುತ್ತಿದ್ದನು. ಅವರು ಸದಾ ಭಯದ ನೆರಳಿನಲ್ಲಿ ಬದುಕುತ್ತಿದ್ದರು. ಈ ಕಷ್ಟದಿಂದ ಪಾರಾಗಲು ಊರಿನ ಜನರು ಆ ರಾಕ್ಷಸನೊಂದಿಗೆ ಒಪ್ಪಂದವನ್ನು ಮಾಡಿಕೊಂಡರು. ದಿನ ದಿನವೂ ಸರದಿಯಂತೆ ಒಬ್ಬರ ಮನೆಯಿಂದ ಒಂದು ಬಂಡಿ ಅನ್ನ, ಎರಡು ಬಲಿಷ್ಠ ಹೋರಿಗಳು ಮತ್ತು ಒಬ್ಬ ಮನುಷ್ಯನನ್ನು ಒಪ್ಪಿಸಬೇಕಿತ್ತು.

ಈಗ ಆ ಬ್ರಾಹ್ಮಣನ ಮನೆಯ ಸರದಿಯಿತ್ತು. ಅವರಿಗೆ ಒಬ್ಬನೇ ಮಗನು. ಅವನು ರಾಕ್ಷಸನ ಆಹಾರವಾಗಬೇಕಲ್ಲಾ ಎಂದು ದು:ಖಿಸುತ್ತಿದ್ದರು. ಆಗ ಕುಂತಿ ಅವರಿಗೆ ಸಮಾಧಾನ ಹೇಳಿದಳು. ಅವರ ಮಗನ ಬದಲು ತನ್ನ ಐವರು ಮಕ್ಕಳಲ್ಲಿ ಒಬ್ಬನನ್ನು ಕಳುಹಿಸಿ ಕೊಡುವುದಾಗಿ ಭರವಸೆ ನೀಡಿದಳು. ಇತರೆ ಸಿದ್ಧತೆಗಳನ್ನು ಮಾಡಿಕೊಳ್ಳಲು ತಿಳಿಸಿದಳು. ಕುಂತಿ ಮನೆಗೆ ಬಂದಳು. ಭೀಮನಿಗೆ ಎಲ್ಲಾ ವಿಷಯ ತಿಳಿಸಿದಳು. ನಾಳೆ ನಿನಗೆ ಮೃಷ್ಟಾನ್ನ ಭೋಜನ; ಹೊಟ್ಟೆ ತುಂಬ ಊಟ ಮಾಡಬಹುದೆಂದಳು.





ಮರುದಿನ ಭೀಮ ನಸುಕಿನಲ್ಲಿಯೆ ಎದ್ದನು. ಬೇಗ ಬೇಗ ಸ್ನಾನಾದಿಗಳನ್ನು ಮಾಡಿ ವೀರಗಚ್ಚೆ ಹಾಕಿ ಸಿದ್ಧನಾದನು. ಬಂಡಿಯಲ್ಲಿ ಬಗೆಬಗೆಯ ಆಹಾರವನ್ನು ದೊಡ್ಡ ದೊಡ್ಡ ಪಾತ್ರೆಗಳಲ್ಲಿ ತುಂಬಿ ಇಡಲಾಗಿತ್ತು. ಹಾಲು, ಮೊಸರು, ತುಪ್ಪದ ಗಡಿಗೆಗಳನ್ನು ಒಪ್ಪವಾಗಿ ಜೋಡಿಸಿದ್ದರು. ತಾಯಿ ಕುಂತಿಗೆ ನಮಸ್ಕರಿಸಿ ಭೀಮ ಬಂಡಿಯನ್ನು ಏರಿದನು.

ಇನ್ನೊಬ್ಬರಿಗಾಗಿ ತನ್ನ ಪ್ರಾಣ ಕೊಡಲು ಭೀಮನು ಸಿದ್ಧನಾದನು. ಈ ತ್ಯಾಗಿಯನ್ನು ಊರಿನ ಜನರು ಅಚ್ಚರಿಯಿಂದ ನೋಡುತ್ತಿದ್ದರು. ಆದರೆ ಭೀಮ ಯಾವ ಭಯವೂ ಇಲ್ಲದೆ ನಗು ನಗುತ್ತ ನಾನು ಹೋಗಿ ಬರುವೆ. ನೀವು ಹೊರಡಿ ಎಂದು ಊರ ಜನರಿಗೆ ಸಮಾಧಾನ ಹೇಳಿದ. ಬಂಡಿಯನ್ನು ರಾಕ್ಷಸನಿದ್ದ ಕಡೆಗೆ ಓಡಿಸಿದ.

ಬಂಡಿ ಊರಿನಿಂದ ದೂರ ಬಂದಿತು. ಅಡುಗೆಯ ಸುವಾಸನೆ ಭೀಮನ ಹಸಿವನ್ನು ಕೆರಳಿಸಿತು. ಹೋರಿಗಳನ್ನು ನಿಧಾನವಾಗಿ ಹೋಗಲು ಬಿಟ್ಟನು. ಒಂದೊಂದಾಗಿ ಭಕ್ಷ್ಯಗಳನ್ನು ಸವಿಯತೊಡಗಿದ. ದೊಡ್ಡ ದೊಡ್ಡ ತುತ್ತುಗಳನ್ನು ಮಾಡುತ್ತ ಚೆಂಡಿನಂತೆ ಹಾರಿಸುತ್ತ. ಮೋಜಿನಿಂದ ಊಟ ಮಾಡಲು ತೊಡಗಿದ. ಮಧ್ಯ ಮಧ್ಯದಲ್ಲಿ ಹಾಲು ತುಪ್ಪದ ಗಡಿಗೆಗಳನ್ನು ಎತ್ತಿ ಎತ್ತಿ ಕುಡಿದನು. ಮುಕ್ಕಾಲು ಪಾಲು ಬಂಡಿಯ ಅನ್ನವನ್ನು ಭೀಮನೇ ಮುಗಿಸಿದನು. ಹೋರಿಗಳು ಬಂಡಿಯನ್ನು ಎಳೆಯುತ್ತಾ ಎಳೆಯುತ್ತಾ ರಾಕ್ಷಸನಿರುವ ಬೆಟ್ಟದ ಬುಡಕ್ಕೆ ಬಂದವು.

ದಿನವೂ ಬೇಗ ಬರುವ ಬಂಡಿ ಇಂದು ತಡವಾಗಿ ಬಂದುದನ್ನು ಕಂಡು ರಾಕ್ಷಸನಿಗೆ ಕೋಪ ನೆತ್ತಿಗೇರಿತ್ತು. ಬಂಡಿಯನ್ನು ಕಂಡ ಕೂಡಲೇ ಬೆಟ್ಟದ ಮೇಲಿಂದ ದಡದಡನೆ ಕೆಳಗಿಳಿದು ಬಂದ. ಅವನನ್ನು ಕಂಡ ಭೀಮ ಅನ್ನ ಮೆತ್ತಿದ ಕೈಯನ್ನು ನೆಕ್ಕುತ್ತ. "ಎಲವೋ ಕುನ್ನಿ ಕೂಳಿದೆ ತಿನ್ನು ಬಾ" ಎಂದು ಕರೆದನು. ಇಲ್ಲಿಯವರೆಗೆ ಜನ ತನ್ನನ್ನು ಕಂಡ ಕೂಡಲೇ ಗಡಗಡ ನಡುಗುತ್ತಿದ್ದರು. ಆದರೆ ಇವನು ತಾನು ತಿಂದು ಮಿಕ್ಕಿದ್ದನ್ನು ತಿನ್ನು ಬಾ ಎಂದು ಏಕವಚನದಲ್ಲಿ ಕರೆದುದಕ್ಕೆ ಬಹಳ ಸಿಟ್ಟು ಬಂತು. ಮೊದಲು ಇವನನ್ನು ಮುಗಿಸಿ, ಅನ್ನ – ಹೋರಿಗಳನ್ನು ತಿನ್ನುವೆ. ನಂತರ ಊರಿನ ಜನರ ಪ್ರಾಣವನ್ನು ಹಿಂಡುವೆ ಎಂದು ಮುನ್ನಡೆದನು.

ಅತ್ತ ಭೀಮ ರಾಕ್ಷಸನಿಗೆ ಸಿಟ್ಟು ತರಿಸಲು ಅನ್ನದ ದೊಡ್ಡ ದೊಡ್ಡ ತುತ್ತನ್ನು ಹಾರಿಸುತ್ತಾ ಬಾಯಲ್ಲಿ ಹಿಡಿಯುತ್ತಿದ್ದನು. ರಾಕ್ಷಸನನ್ನು ನೋಡಿ ಭಕ್ಷ್ಯಗಳನ್ನು ತೋರಿಸಿ ಅಣಕಿಸ ತೊಡಗಿದನು.

ಬಕಾಸುರ ಕೋಪದಿಂದ ಎರಡು ಕೈ ಮುಷ್ಟಿಕಟ್ಟಿ, ಭೀಮನ ಬೆನ್ನಿಗೆ ಗುದ್ದನ್ನು ಕೊಟ್ಟನು. ಭೀಮ ಆ ಏಟಿಗೆ ನಗುತ್ತಾ "ಇಷ್ಟೇನಾ ನಿನ್ನ ಶಕ್ತಿ ?" ಎಂದು ಹಂಗಿಸಿದನು.

ಬಕಾಸುರನಿಗೆ ಎಲ್ಲಿಲ್ಲದ ಕೋಪ ಬಂತು. ಭೀಮನ ಮೇಲೆ ಏರಿ ಬಂದನು. ಒಬ್ಬರನ್ನೊಬ್ಬರು ಗುದ್ದಿದರು. ಬೆಟ್ಟದ ಬಂಡೆಗಲ್ಲುಗಳನ್ನು ಎತ್ತಿ ಬಿಸಾಡಿದರು. ಮರಗಳನ್ನು ಬೇರು ಸಹಿತ ಕಿತ್ತು ಒಬ್ಬರ ಮೇಲೊಬ್ಬರು ಎಸೆದರು.

ಕೊನೆಗೆ ಭೀಮ ಬಕಾಸುರನ ಮುಖಕ್ಕೆ ಏಟನ್ನು ಕೊಟ್ಟನು. ಬಕಾಸುರ ರಕ್ತವನ್ನು ಕಾರುತ್ತ ಸತ್ತು ಬಿದ್ದನು.

ಆಗಲೆ ಸಂಜೆಯಾಗಿತ್ತು. ಭೀಮ ಬಕಾಸುರನ ಹೆಣದೊಂದಿಗೆ ಊರಿಗೆ ಬಂದನು. ಊರ ಮುಂದೆ ಬಂಡಿಯನ್ನು ನಿಲ್ಲಿಸಿ, ಮನೆಗೆ ಹೋಗಿ ಹಾಯಾಗಿ ನಿದ್ರಿಸಿದನು. ಮರುದಿನ ಬಂಡಿಯಲ್ಲಿರುವ ರಾಕ್ಷಸನನ್ನು ಕಂಡ ಜನ ಹೆದರಿದರು. ಆದರೆ ಸತ್ತಿರುವುದನ್ನು ಕಂಡು ಸಂತಸಪಟ್ಟರು. ಭೀಮನ ಧೈರ್ಯವನ್ನು ಮೆಚ್ಚಿ ಕೊಂಡಾಡಿದರು.



## (ಇ) ಚಿತ್ರ ನೋಡಿ ಕಥೆ ಓದು – ೧

ಒಂದು ಇತ್ತು. ಅಲ್ಲಿ ಒಂದು ಇತ್ತು. ಒಂದು ದಿನ ಹುಲಿಯು ಒಂದು ದ ಬುಡದಲ್ಲಿ ಮಲಗಿತ್ತು. ಒಬ್ಬ ನು ಅಲ್ಲಿಗೆ ಬಂದ. ಯನ್ನು ಕಂಡ. ಅದರ ಚರ್ಮವನ್ನು ಮಾರಿದರೆ ತುಂಬಾ ಹಣ ಬರುತ್ತದೆ ಎಂದು ಆಸೆ ಪಟ್ಟು ದಿಂದ ಗೆ ಗುರಿಯಿಟ್ಟ.

ಮರದ ಮೇಲೆ ಒಂದು ಇತ್ತು. ಅದು ನನ್ನು ನೋಡಿತು. ನ್ನು ಕಾಪಾಡಬೇಕೆಂದು ಯೋಚಿಸಿತು. ತಕ್ಷಣ ಬೇಟೆಗಾರನ ಮೇಲೆ ಕಿರುಚುತ್ತಾ ಹಾರಿತು. ದ ಗುರಿ ತಪ್ಪಿತು. ಬೇಡನು ಕೆಳಗೆ ಬಿದ್ದ. ಓಡಿ ಹೋಯಿತು. ಎಚ್ಚರವಾಗಿ ಓಡಿ ಹೋಯಿತು. ಯ ಪ್ರಾಣ ಉಳಿಯಿತು.

ನು ಕೋತಿಯ ಮೇಲೆ ಸಿಟ್ಟಿಗೇರಿದ. ಅದಕ್ಕೆ ತಕ್ಕ ಪಾಠ ಕಲಿಸಬೇಕೆಂದು ಕೊಂಡ. ಗಿಡ ಬಳ್ಳಿಗಳಿಂದ ಒಂದು ಗೂಡನ್ನು ತಯಾರು ಮಾಡಿದ. ಅದರೊಳಗೆ ಗಳನ್ನು ಇಟ್ಟು ಮರದ ಹಿಂದೆ ಅಡಗಿ ಕುಳಿತುಕೊಂಡ.

ದ ಬುಡದಲ್ಲಿ ಗಳ ಹುತ್ತವಿತ್ತು. ಇರುವೆಗಳು ನನ್ನು ನೋಡಿದವು. ಯಾವುದೋ ಪ್ರಾಣಿಯನ್ನು ಹಿಡಿಯಲು ಹೊಂಚು ಹಾಕಿದ್ದಾನೆ. ಇವನನ್ನು ಓಡಿಸಬೇಕೆಂದುಕೊಂಡವು. ನ ಕಾಲುಗಳನ್ನು ಕಚ್ಚತೊಡಗಿದವು. ಅವನು ಹೆದರಿ ಓಡಿ ಹೋದನು. ಇದನ್ನು ಯೊಂದು ನೋಡಿತು. ಬೇಟೆಗಾರನನ್ನು

ಏಕೆ ಕಚ್ಚಿದಿರಿ ಎಂದು ಕೇಳಿತು. 'ದುಷ್ಟ ಅವನು ನಮಗೆಲ್ಲ ಶತ್ರು. ಅದಕ್ಕೆ ಅವನನ್ನು ಕಚ್ಚಿದೆವು' ಎಂದು ಹೇಳಿದವು.

ಯು ನ ಬಳಿಗೆ ಹೋಗಿ ನೀನು ಬೇಟೆಗಾರನ ಮೇಲೆ ಏಕೆ ಹಾರಿದೆ? ಎಂದು ಕೇಳಿತು. ಅದಕ್ಕೆ ಮಂಗವು ನಮ್ಮ ಯಣ್ಣನನ್ನು ಕೊಲ್ಲಬೇಕೆಂದು ಬಿಲ್ಲು ಬಾಣ ಸಿದ್ದ ಮಾಡಿದ್ದ. ಅವನ ಮೇಲೆ ಹಾರಿದಾಗ ಬೇಟೆಗಾರನ ಗುರಿ ತಪ್ಪಿ ಯ ಪ್ರಾಣ ಉಳಿಯಿತು. ಬೇಟೆಗಾರ ಕೆಟ್ಟವ ಎಂದು ಹೇಳಿತು.

ಯು ಯ ಬಳಿಗೆ ಹೋಗಿ 'ಹುಲಿರಾಯ ನೀನು ಏಕೆ ಓಡಿ ಹೋದೆ? "ನನಗೆ ಏನೋ ಶಬ್ದ ಕೇಳಿತು. ಕಣ್ಣು ತೆರೆದು ನೋಡಿದಾಗ ಬೇಟೆಗಾರ ಕಂಡ. ಅದಕ್ಕೆ ಹೆದರಿ ಓಡಿ ಹೋದೆ" ಎಂದು ಹೇಳಿತು. ಆಗ ಯು, ಮತ್ತು ಗಳು ಮಾಡಿದ ಸಾಹಸವನ್ನು ವರ್ಣಿಸಿತು. ಗೆ ಆಶ್ಚರ್ಯವಾಯಿತು.



ಅಷ್ಟರಲ್ಲಿ ಕಿರುಚಿದ ಶಬ್ದ ಕೇಳಿತು. ಮತ್ತು ಅಲ್ಲಿಗೆ ಬಂದವು. ನ ಗೂಡಿನಲ್ಲಿ ವು ಸಿಕ್ಕಿ ಹಾಕಿಕೊಂಡಿತ್ತು. ತಕ್ಷಣ ಗೂಡನ್ನು ತನ್ನ ಮುಂಗಾಲುಗಳಿಂದ ಕಿತ್ತುಹಾಕಿತು. ಹೊರಗೆ ಬಂದಿತು. ಅಂದಿನಿಂದ ಮತ್ತು ಗೆಳೆಯರಾಗಿ ಬಾಳಿದವು.

**ನೀತಿ : ಇನ್ನೊಬ್ಬರ ಕಷ್ಟದಲ್ಲಿ ಸಹಾಯಮಾಡು**



## (ಈ) ಚಿತ್ರ ನೋಡಿ ಕಥೆ ಓದು–೨

ಪುರದಲ್ಲಿ ಹಾಗೂ ಣ್ಣರೆಂಬ ಗೆಳೆಯರಿದ್ದರು. ೧ ದಿನ ಕಟ್ಟಿಗೆ ತರಲು ಹೋದರು. ಸ್ವಲ್ಪ ಸಮಯದ ನಂತರ ದೂರದಲ್ಲಿ ಒಂದು ಬರುವುದನ್ನು ಕಂಡರು. ಅದು ತಮ್ಮನ್ನು ತಿನ್ನುತ್ತದೆಂದು ತಿಳಿದು ನು ಒಬ್ಬನೆ ಬೇಗನೆ ವನ್ನು ಹತ್ತಿ ಕುಳಿತನು. ಆದರೆ ಣ್ಣನಿಗೆ ಮರ ಹತ್ತಲು ಬರುತ್ತಿರಲಿಲ್ಲ. ಹತ್ತಲು ನು ಸಹಾಯ ಮಾಡಲಿಲ್ಲ.

ಕೊನೆಗೆ ಣ್ಣನು ಒಂದು ಉಪಾಯ ಮಾಡಿ ಸತ್ತಂತೆ ನೆಲದ ಮೇಲೆ ಮಲಗಿದನು. ಯು ನೆಲದ ಮೇಲೆ ಬಿದ್ದ ಣ್ಣನನ್ನು ನೋಡಿ ಯನ್ನು ಮೂಸಿ ನೋಡಿ ಹೋಯಿತು. ನಂತರ ನು ದಿಂದ ಕೆಳಗೆ ಇಳಿದು ಯು ನಿನ್ನ ಯಲ್ಲಿ ಏನು ಹೇಳಿತು ಎಂದನು. ಅದಕ್ಕೆ ಣ್ಣನು "ಸಮಯಕ್ಕೆ ಸಹಾಯವಾಗದ ಗೆಳೆಯ ಮಿತ್ರ ದ್ರೋಹಿ" ಎಂದು ಹೇಳಿತು ಎಂದನು.



**ನೀತಿ: ಆಪತ್ತಿಗಾದವನೇ ಮಿತ್ರ**



## (ಉ) ಪದಬಂಧ

**ಜ್ಞಾನಪೀಠ ವಿಜೇತರು : ಎಂಟು ಮಂದಿ ಕನ್ನಡ ಜ್ಞಾನಪೀಠ ಪ್ರಶಸ್ತಿ ಪಡೆದವರನ್ನು ಗುರುತಿಸಿ.**

| ಚಂ | ದ್ರ | ಶೇ | ಖ | ರ | ಕಂ | ಬಾ | ರ |
|---|---|---|---|---|---|---|---|
| ಗಿ | ಶಿ | ನ | ತಿ | ಪು | ಕು | ವೆಂ | ಅ |
| ರೀ | ಶಿ | ವ | ವೆಂ | ತಿ | ಕ | ಪೂ | ನಂ |
| ಶ | ರ | ಕು | ರಾ | ಕಾ | ಶ್ರೀ | ಚಂ | ತ |
| ಕಾ | ಮಾ | ಬಾ | ಗೋ | ಮ | ಚಿ | ತೇ | ಮೂ |
| ನಾರ್ | ಸ್ತಿ | ಕೃ | ಕ | ಣ್ವ | ಕಾ | ಹ | ರ್ತಿ |
| ಡ | ವಿ | ಸಿ | ದ್ದ | ಲಿಂ | ಗ | ರಂ | ಕೀ |
| ಆ | ಸ್ತಿ | ದ | ರಾ | ಬೇಂ | ದ್ರೆ | ಯ್ಯ | ತ |

ಮಾದರಿ: ೧. ಕುವೆಂಪು : ೨. ದ.ರಾ.ಬೇಂ.ದ್ರೆ ೩. ..........................................

೪. .................................................. ೫. ....................................................

೬. ...................................... ೭. .............................. ೮. ..........................

**ಕಾಡು ಪ್ರಾಣಿಗಳನ್ನು ಗುರ್ತಿಸಿ: ಮಾದರಿ : ತೋಳ**

| ಆ | ಘೆಂ | ರು | ಕಾ | ಡು | ಕೋ | ಣ |
|---|---|---|---|---|---|---|
| ಕ | ನೆ | ಡಾ | ಹು | ಲಿ | ಸು | ಮೊ |
| ಳು | ಹು | ಚಿ | ಲ್ಲು | ಕ | ತ್ತೆ | ಲ |
| ಕೆ | ಜಿಂ | ರ | ಮಾ | ಕು | ರಿ | ನ |
| ಸಿಂ | ಹ | ತೆ | ಕ | ದು | ಗೆ | ಕಾ |
| ತೋ | ಳ | ಮೊ | ರ | ರೆ | ಮಂ | ಗ |
| ಕಾ | ಡೆ | ಮ್ಮೆ | ಡಿ | ಸೋ | ವು | ಹಾ |

________________

________________

________________

________________

________________

________________

________________

# ೫ನೇ ತರಗತಿ ದ್ವಿತೀಯ ಭಾಷೆ ಕನ್ನಡ ಪಠ್ಯಪುಸ್ತಕ ರಚನಾ ವಿವರ ತಃಖ್ತೆ (ಎರಡನೆಯ ಸೆಮಿಸ್ಟರ್)

| ಕ್ರ.ಸಂ. | ಪಾಠದ ಹೆಸರು | ಸಾಹಿತ್ಯ | ಪ್ರಮುಖ ಸಾಮರ್ಥ್ಯಗಳು | ಭಾಷಾ ಚಟುವಟಿಕೆಗಳು | ಮೌಲ್ಯಗಳು | ಬೋಧನಾ ವಿಧಾನ | ಅವಧಿ |
|---|---|---|---|---|---|---|---|
| ೧ | ಸಾಹಸಿ ಮಹಿಳೆಯರು | ಜೀವನ ಚರಿತ್ರೆ ಘಟನೆಗಳು | **ಓದುವಿಕೆ :** ಸರಳ ಪದ್ಯ, ಕಥೆ, ಘಟನೆ ಗಟ್ಟಿಯಾಗಿ ಓದುವುದು. **ಮಾತನಾಡುವುದು :** ಸರಳ ಪ್ರಶ್ನೆಗಳಿಗೆ ಉತ್ತರಿಸುವುದು | ಗಟ್ಟಿಯಾಗಿ ಓದುವುದು ಉತ್ತರಿಸುವುದು ಅದಕ್ಕಾಗಿ ನಿರ್ದಿಷ್ಟ ಚಟುವಟಿಕೆಗಳು. ಕಾಲಗಳ ಪರಿಚಯ | ಸಮಾಜ ಸೇವೆ ರಾಷ್ಟ್ರ ಪ್ರಜ್ಞೆ | ಹರ್ಬಾರ್ಟನ ಪಂಚ ಸೋಪಾನ, ಚಟುವಟಿಕೆ ಪಾಠ | ೦೮ |
| ೨ | ಧೀರ ಬಾಲಕ ನರೇಂದ್ರ | ಜೀವನ ಚರಿತ್ರೆ ಮತ್ತು ಘಟನೆಗಳು | **ಆಲಿಸುವಿಕೆ :** ಪಠ್ಯದಲ್ಲಿರುವ ಸರಳ ಮಾಹಿತಿಯನ್ನು ಗ್ರಹಿಸುವುದು? ಯಾರು? ಯಾವಾಗ? ಎಲ್ಲಿ ಪ್ರಶ್ನೆಗಳಿಗೆ ಉತ್ತರಿಸುವುದು. ಮಾತನಾಡುವುದು: ಸರಳ ಪ್ರಶ್ನೆಗಳಿಗೆ ಉತ್ತರಿಸುವುದು ಬರಹ : ಸೂಚನೆಗಳನ್ನು ಉತ್ತರಿಸುವುದು. | ಓದಿ ಅರ್ಥೈಸಿ ಉತ್ತರಿಸಿ ಚಟುವಟಿಕೆಗಳು ಉತ್ತಮ ಕಂಠಪಾಠ | ಏಕಾಗ್ರತೆಯ ಮಹತ್ವ | ಹರ್ಬಾರ್ಟನ ಪಂಚ ಸೋಪಾನ ಹಾಗೂ ಚಿತ್ರಗಳ ಸಂಗ್ರಹ ತೋರಿಸಿ ವಿಚಾರ ಸಂಗ್ರಹ ತೋರಿಸಿ ವಿಚಾರ | ೦೮ |
| ೩ | ಅಮ್ಮ | ಕವಿತೆ | ಸರಳ ಪದ್ಯ ಮತ್ತು ಕಥೆಗಳನ್ನು ಗಟ್ಟಿಯಾಗಿ ಓದುವುದು. ಆಲಿಸುವಿಕೆ : ಪಠ್ಯದಲ್ಲಿರುವ ಸರಳ ಮಾಹಿತಿಯನ್ನು ಗ್ರಹಿಸಿ, ಯಾರು ? ಯಾವಾಗ ? ಇತರ ಪ್ರಶ್ನೆಗಳಿಗೆ ಉತ್ತಿರಿಸುವುದು. | ತಾಯಿಯ ಪ್ರೀತಿಯ ಬಗೆಗೆ ಚರ್ಚೆ ಹಾಗೂ ಕವಿತೆ ಹಾಡುವುದು | ತಾಯಿಯ ಮಹತ್ವ | Brain maping Method | ೦೬ |

| ಕ್ರ.ಸಂ. | ಪಾಠದ ಹೆಸರು | ಸಾಹಿತ್ಯ | ಪ್ರಮುಖ ಸಾಮರ್ಥ್ಯಗಳು | ಭಾಷಾ ಚಟುವಟಿಕೆಗಳು | ಮೌಲ್ಯಗಳು | ಬೋಧನಾ ವಿಧಾನ | ಅವಧಿ |
|---|---|---|---|---|---|---|---|
| ೪ | ಜಲ ಮಾಲಿನ್ಯ | ನಾಟಕ | ಆಲಿಸುವುದು : ಸರಳ ಮಾಹಿತಿ ಸಂಗ್ರಹಿಸುವುದು ಯಾರು? ಯಾವಾಗ? ಎಂಬ ಪ್ರಶ್ನೆಗಳಿಗೆ ಉತ್ತರಿಸುವುದು<br>ಮಾತನಾಡುವುದು : ಸರಳ ಪ್ರಶ್ನೆಗಳಿಗೆ ಉತ್ತರಿಸುವದು<br>ಬರಹ : ಸೂಚನೆಗಳನ್ನು ಅನುಸರಿಸಿ ವಾಕ್ಯಗಳನ್ನು ಬರೆಯುವುದು | ನಾಟಕ ಆಡುವುದು | ಪರಿಸರ ಜಾಗೃತಿ | ನಾಟಕ ಪದ್ಧತಿ | ೦೮ |
| ೫ | ಇದೊಂದು ಸತ್ಯ ಕಥೆ | ಘಟನೆ | ಓದುವಿಕೆ : ಸರಳ ಘಟನೆ ಅಥವಾ ಪಠ್ಯವನ್ನು ಗಟ್ಟಿಯಾಗಿ ಓದುವದು.<br>ಮಾತನಾಡುವುದು : ಸರಳ ಪ್ರಶ್ನೆಗಳಿಗೆ ಉತ್ತರಿಸುವುದು. | ಚಿತ್ರ ಸೇರಿಸಿಕೊಂಡು ಕಥೆ ಓದುವುದು. ಹಾಗೂ ಘಟನೆ ಚರ್ಚೆ | ಭ್ರಷ್ಟಾಚಾರ ನಿರ್ಮೂಲನೆ | ಕಥಾ ವಿಧಾನ | ೦೮ |
| ೬ | ಉದಯ ರಾಗ | ಕವಿತೆ | ಮಾತನಾಡುವುದು : ಸರಳ ಪ್ರಾಸಗೀತೆ, ಪದ್ಯ ಹಾಗೂ ಹಾಡುಗಳನ್ನು ಹಾವ ಭಾವದ ಮೂಲಕ ಸಾಮೂಹಿಕವಾಗಿಯೂ, ವೈಯಕ್ತಿಕವಾಗಿಯೂ ಹಾಡುವುದು. | ಪ್ರಬಂಧ ಕಲ್ಪನೆ ಚಟುವಟಿಕೆ. ಚಿತ್ರಗಳಿಗೆ ಬಣ್ಣ ಹಾಕುವುದು. ರಾಗಬದ್ಧವಾಗಿ ಹಾಡುವುದು | ದೊಡ್ಡವನಾದರೂ ವಿನೀತನಾಗಿರು | ರಾಗಬದ್ಧವಾಗಿ ಹಾಡುವುದು. ಪ್ರಶ್ನೋತ್ತರ ಪದ್ಧತಿ | ೦೮ |
| ೭ | ಒಂದು ಪತ್ರಿಕೆ ವರದಿ | ಘಟನೆ | ಓದುವುದು : ಮುದ್ರಿತ ಪತ್ರಿಕೆಯ ಪಠ್ಯವನ್ನು ಓದಿ ಗ್ರಹಿಸುವುದು.<br>ಮಾತನಾಡುವದು : ಪಠ್ಯದಲ್ಲಿರುವ ಸರಳ ಮಾಹಿತಿ ಉತ್ತರಿಸುವುದು | ಪತ್ರಿಕೆ ಓದುವ ಚಟುವಟಿಕೆ, ಕಥೆ ಮತ್ತು ಘಟನೆ ಗಳನ್ನು ಓದಿ ಅರ್ಥೈಸಿಕೊಳ್ಳುವ ಚಟುವಟಿಕೆಗಳು | ದೇಶಪ್ರೇಮ, ಸಾಹಸ | ಹರ್ಬರ್ಟನ ಪಂಚ ಸೋಪಾನ ಹಾಗೂ ಚಿತ್ರಗಳ ಸಂಗ್ರಹ ತೋರಿಸಿ ವಿಚಾರಕ್ಕೆ ಹಚ್ಚುವುದು. | ೦೮ |

| ಕ್ರ.ಸಂ. | ಪಾಠದ ಹೆಸರು | ಸಾಹಿತ್ಯ | ಪ್ರಮುಖ ಸಾಮರ್ಥ್ಯಗಳು | ಭಾಷಾ ಚಟುವಟಿಕೆಗಳು | ಮೌಲ್ಯಗಳು | ಬೋಧನಾ ವಿಧಾನ | ಅವಧಿ |
|---|---|---|---|---|---|---|---|
| ೮ | ಪತ್ರಗಳು | ಪತ್ರಗಳು | ಓದುವುದು : ಪತ್ರ ಓದುವುದು ಬರಹ : ಪತ್ರ ಬರೆಯುವ ರೀತಿ ಕಲಿಯುವುದು. | ಪತ್ರ ಓದುವುದು. ಪತ್ರ ಬರೆಯುವುದು | ಪತ್ರ ಬರಹ ರೀತಿ ಅರಿಯುವುದು | ಪ್ರಾತ್ಯಕ್ಷಿಕ ವಿಧಾನ | ೦೬ |
| ೯ | ಜನಪದ | ಜನಪದ ತ್ರಿಪದಿಗಳು | ಸರಳ ಹಾಗೂ ಬಳಕೆಯಲ್ಲಿರುವ ಜನಪ್ರೀಯ ಪ್ರಾಸಗೀತೆ ಮತ್ತು ಕಥೆಗಳನ್ನು ಆಲಿಸುವದರ ಜೊತೆಗೆ ಅರ್ಥ ಮಾಡಿಕೊಳ್ಳಬೇಕು. | ಹಾಡುವುದು | ಮಕ್ಕಳ ಸೌಂದರ್ಯ ಹಾಗೂ ತಾಯಿಯ ಹಾರೈಕೆ | ರಾಗಬದ್ಧವಾಗಿ ಹಾಡುವುದು. ಪ್ರಶ್ನೆ ಕೇಳುವುದು. ಉತ್ತರ ಪಡೆಯುವ ಸಂವಹನ ಪದ್ಧತಿ | ೦೬ |
| [illegible] | ಮಲ್ಲಿಗೆ ಮಂಟಪ<br>೧. ಶ್ರವಣ ಕುಮಾರ<br>೨. ಬಕಾಸುವ ವಧೆ<br>೩. ಚಿತ್ರ ನೋಡಿ ಕತೆ ಓದು – ಕೋತಿಯ ಕತೆ<br>೪. ಚಿತ್ರನೋಡಿ ಕತೆ ಓದು –<br>೫. ಪದ ಬಂಧ | ಕಥೆ ಘಟನೆ ಚಿತ್ರಕಥೆ ಪದ ಬಂಧ | ಸರಳವಾಗಿ ಓದುವದು ಅರ್ಥೈಸುವದು | ಕಥೆ, ಘಟನೆ, ಓದಿ ಅರ್ಥೈಸಿಕೊಳ್ಳುವದು. ಚಿತ್ರಸಹಿತ ಕಥೆ. ಓದುವದು ಪದಬಂಧ | ೧. ತಂದೆ ತಾಯಿಗಳ ಸೇವೆ.<br>೨. ದುಷ್ಟರಿಗೆ ಶಿಕ್ಷೆ<br>೩. ಉಪಾಯ ಬಲ್ಲವನಿಗೆ ಅಪಾಯವಿಲ್ಲ.<br>೪. ಗೆಳೆತನದ ಮಹತ್ವ | ಓದುವುದು. ಪ್ರಶ್ನೋತ್ತರ ಪದ್ಧತಿ ಚಟುವಟಿಕೆ ಪದ್ಧತಿ ಪದಬಂಧ ಪ್ರಾತ್ಯಕ್ಷಿಕೆ ವಿಧಾನ. | ೦೮ |

# ಪದಕೋಶ

## ಅ

ಅಂಗವಿಕಲತೆ – ದೇಹದ ಭಾಗಗಳಲ್ಲಿ ಕೊರತೆ ಇರುವುದು
ಅಚ್ಚರಿ – ಆಶ್ಚರ್ಯ
ಅಧೀನ – ಒಬ್ಬರ ಕೈಕೆಳಗಿರುವ
ಅದ್ದೂರಿ – ವೈಭವ, ವಿಜೃಂಭಣೆ
ಅನುಕರಣೆ – ಅನುಸರಿಸು, ಅದರಂತೆ ಮಾಡು
ಅನುರಾಗ – ಪ್ರೀತಿ
ಅಪರಾಧ – ತಪ್ಪು
ಅಪ್ಪಾಜಿ – ತಂದೆ
ಅಪ್ಪು – ಆಲಿಂಗನ ಮಾಡು
ಅಬ್ಬರ – ಆರ್ಭಟ, ಅತಿಶಯ
ಅಬಲೆ – ಬಲಹೀನೆ
ಅಭ್ಯಾಸ – ರೂಢಿ, ವ್ಯಾಸಂಗ
ಅಭಿರುಚಿ – ಆಸಕ್ತಿ
ಅಸಹಕಾರ – ಸಹಕರಿಸದೆ ಇರುವುದು
ಅವಶೇಷ – ಉಳಿದುದು.

## ಆ

ಆಗಮಿಸು – ಬಂದುಸೇರು
ಆಗಸ – ಆಕಾಶ, ಗಗನ
ಆನಂದ – ಸಂತೋಷ
ಆಂದೋಲನ – ಚಳುವಳಿ
ಆರಂಭ – ಪ್ರಾರಂಭ, ಮೊದಲು
ಆಶೀರ್ವಾದ – ಹರಕೆ
ಆಸ್ಪತ್ರೆ – ಚಿಕಿತ್ಸಾಲಯ
ಆಸಕ್ತಿ – ಶ್ರದ್ಧೆ

## ಇ

ಇಂಗಿಸು – ಒಣಗಿಸು
ಇಂತಿ – ಇಂತು–ಹೀಗೆ
ಇತರ – ಬೇರೆಯ
ಇರುಳು – ರಾತ್ರಿ

## ಈ

ಈಚೆ – ಈ ಕಡೆ
ಈಟಿ – ಶಲ್ಯ, ಭರ್ಚಿ.
ಈಳೆ – ಕಿತ್ತಳೆ, ನೇರಳೆ ಹಣ್ಣು

## ಉ

ಉತ್ತರಾಧಿಕಾರಿ – ವಾರಸುದಾರ
ಉತ್ತೀರ್ಣ – ತೇರ್ಗಡೆ
ಉದಯ – ಹುಟ್ಟು
ಉದಯರಾಗ – ಬೆಳಗಿನ ಜಾವದಲ್ಲಿ ಹಾಡುವ ರಾಗ.
ಉಪಕಾರಿ – ಸಹಾಯ ಮಾಡುವವ
ಉಷೆ – ಅರುಣೋದಯ ಕಾಲ
ಉಸಿರು – ಶ್ವಾಸೋಚ್ಛ್ವಾಸ ಮಾಡು, ಜೀವ

## ಊ

ಊಟೆ – ನೀರಿನ ಚಿಲುಮೆ, ಬುಗ್ಗೆ
ಊತ – ಬಾತುಕೊಳ್ಳುವಿಕೆ
ಊಹೆ – ಎಣಿಕೆ

ಋ

ಋಜು - ನೇರವಾದ, ಪ್ರಾಮಾಣಿಕ
ಋಣ - ಸಾಲ
ಋತು - ವರ್ಷದಲ್ಲಿ ಎರಡೆರಡು ತಿಂಗಳ ಅವಧಿ

ಎ

ಎಗರು - ಚಿಮ್ಮು, ಜಿಗಿ.
ಎಟುಕು - ನಿಲುಕು, ಕೈಗೆ ಸಿಗುವಿಕೆ.
ಎಡವಟ್ಟು - ಕ್ರಮ ತಪ್ಪು
ಎಬಡ - ದಡ್ಡ

ಐ

ಐಕ್ಯ - ಒಗ್ಗಟ್ಟು, ಒಂದಾಗು
ಐಬು - ಕುಂದು, ಕೊರತೆ

ಒ

ಒಡೆ - ಸೀಳು
ಒತ್ತಡ - ಒತ್ತುವಿಕೆ

ಓ

ಓಕುಳಿ - ಬಣ್ಣದ ನೀರು
ಓಣಿ - ಕೇರಿ

ಔ

ಔತಣ - ಭೋಜನ

ಕ

ಕಂಗಳು - ಕಣ್ಣುಗಳು
ಕಂಗು - ಅಡಕೆ ಮರ
ಕಡಲು - ಸಮುದ್ರ
ಕತ್ತಲು - ಅಂಧಕಾರ
ಕತ್ತು - ಕೊರಳು
ಕಂಪು - ಸುಗಂಧ
ಕಲಕು - ಕದಡು
ಕಲಾವಿದ - ಕುಶಲ ಕಲೆಗಳನ್ನು ಬಲ್ಲವ
ಕಲುಷಿತ - ಕದಡಿದ, ಬಗ್ಗಡವಾದ
ಕವಿತೆ - ಕವನ, ಪದ್ಯ
ಕಾಮನಬಿಲ್ಲು - ಮಳೆಬಿಲ್ಲು
ಕಾಯಿಲೆ - ರೋಗ
ಕಾರಣ - ನಿಮಿತ್ತ, ಉದ್ದೇಶ
ಕಾಲ - ವೇಳೆ, ಸಮಯ
ಕಿರೀಟ - ರತ್ನಖಚಿತವಾದ ಶಿರೋಭೂಷಣ
ಕೀಟ - ಹುಳು, ಕ್ರಿಮಿ
ಕುಂಟೆ - ವ್ಯವಸಾಯದ ಒಂದು ಉಪಕರಣ.
ಕೂಡಲೆ - ತಕ್ಷಣ
ಕೆಂಡ - ಉರಿಯುತ್ತಿರುವ ಇದ್ದಿಲು
ಕೆದರು - ಹರಡು
ಕೊರಳು - ಕತ್ತು, ಕುತ್ತಿಗೆ
ಕೊಳ್ಳ - ತಗ್ಗಾಗಿರುವ ಪ್ರದೇಶ
ಕೊಳೆ - ಪ್ರಗತಿಯಿಲ್ಲದೆ ಇದ್ದ ಸ್ಥಾನದಲ್ಲೆ ಇರು.
ಕೋಣೆ - ಕೊಠಡಿ
ಕೋರು - ವಿನಂತಿಸು.
ಕ್ಷೇಮ - ನೆಮ್ಮದಿ, ಸುಖ

## ಖ

ಖರ್ಚು – ವೆಚ್ಚ, ವ್ಯಯ
ಖಜೀಲ – ನೊಂದ
ಖಾಸಗಿ – ಸ್ವಂತ

## ಗ

ಗಟ್ಟಿ – ಬಿರುಸಾದುದು
ಗಡಸು – ಬಿರುಸು, ಒರಟು
ಗಮನ – ಲಕ್ಷ್ಯ
ಗರಿ – ರೆಕ್ಕೆ
ಗಾಬರಿ – ಭಯ, ಅಂಜಿಕೆ
ಗುಂಪು – ಸಮೂಹ
ಗುಳ್ಳೆ – ಮೈಮೇಲೆ ಏಳುವ ಬೊಕ್ಕೆ
ಗುರುಕುಲ – ಶಿಕ್ಷಣ ಕೇಂದ್ರ
ಗೂಡು – ನೆಲೆ, ಬೀಡು
ಗೆಜ್ಜೆ – ಕಿರುಗಂಟೆ
ಗೆರೆ – ಗೀಟು
ಗೌರವ – ಹಿರಿಮೆ, ಮರ್ಯಾದೆ

## ಘ

ಘಟ – ಮಣ್ಣಿನ ಪಾತ್ರೆ
ಘನತೆ – ಹಿರಿಮೆ, ಅಂತಸ್ತು
ಘಾಟು – ಕಟುವಾಸನೆ
ಘೋಷಣೆ – ಗಟ್ಟಿಯಾಗಿ ಕೂಗು

## ಚ

ಚಡಪಡಿಸು – ಕಳವಳಗೊಳ್ಳು
ಚಮಕಿಸು – ಹೊಳಪುಗೊಳಿಸು
ಚರ್ಚೆ – ವಿವಾದ, ಪರ ಹಾಗೂ ವಿರೋಧ ವಿಚಾರಗಳು
ಚರ್ಮ – ತೊಗಲು
ಚಾಚು – ವಿಸ್ತಾರ, ಮುಂದಕ್ಕೆ ಒಡ್ಡು
ಚಿಕ್ಕ – ಕಿರಿಯ, ಸಣ್ಣ
ಚಿಂತನ – ಯೋಚನೆ, ಆಲೋಚನೆ
ಚಿನ್ನ – ಹೊನ್ನು, ಬಂಗಾರ
ಚುಕ್ಕಿ – ನಕ್ಷತ್ರ, ತಾರೆ.
ಚೆಲುವು – ಸುಂದರ

## ಛ

ಛಲ – ಹಟಮಾರಿತನ, ದೃಢನಿಶ್ಚಯ
ಛಾಯೆ – ನೆರಳು, ಪ್ರತಿಬಿಂಬ

## ಜ

ಜಗ – ಜಗತ್ತು, ಲೋಕ, ವಿಶ್ವ
ಜಗಳ – ಕಲಹ, ಕಚ್ಚಾಡು
ಜನಪ್ರತಿನಿಧಿ – ಜನರಿಂದ ನೇಮಿಸಲ್ಪಟ್ಟವನು.
ಜಲಚರಜೀವಿ – ನೀರಿನಲ್ಲಿ ವಾಸಿಸುವ
ಜಲಮಾಲಿನ್ಯ – ನೀರು ಕೊಳೆಯಾಗು, ನೀರು ಮಲಿನವಾಗು
ಜಲ್ದಿ – ಬೇಗ
ಜಾಣತನ – ಬುದ್ಧಿವಂತಿಕೆ
ಜಿಂಕೆ – ಹುಲ್ಲೆ, ಹರಿಣಿ
ಜಿನುಗು – ತೊಟ್ಟಿಕ್ಕು
ಜುಟ್ಟು – ಚೆಂಡಿಕೆ, ತುರಾಯಿ
ಜೇನು – ಜೇನುಹುಳು, ಮಕರಂದ
ಜೋಗುಳ – ಲಾಲಿ, ಮಕ್ಕಳನ್ನು ಮಲಗಿಸುವಾಗ ಹಾಡುವ ಹಾಡು

ಜ್ವರ – ಮೈಬಿಸಿಯಾಗುವ ಒಂದು ಬಗೆಯ ರೋಗ ಲಕ್ಷಣ
ಜ್ಯೋತಿ – ಬೆಳಕು, ದೀಪ

ಝ

ಝಳ – ಸೆಕೆ
ಝಲಕು – ಮಿಂಚು, ಹೊಳಪು
ಝಳಪಿಸು – ರಭಸದಿಂದ ತೂಗು

ಟ

ಟಕಮಕ – ಗಾಬರಿ
ಟಗರು – ಗಂಡುಕುರಿ
ಟಿಸಿಲು – ಕವಲು
ಟೊಣಪ – ದಾಂಡಿಗ

ಠ

ಠಕ್ಕು – ಮೋಸ
ಠಸ್ಸೆ – ಒತ್ತುವ ಮುದ್ರೆ
ಠಾವು – ಆಶ್ರಯ, ಸ್ಥಳ

ಡ

ಡಂಬಕ – ಮೋಸ
ಡಾಬು – ನಡುಪಟ್ಟಿ
ಡಿಕ್ಕಿ – ತಲೆಯಿಂದ ತಲೆಯನ್ನು ತಾಕಿಸುವಿಕೆ

ಢ

ಢಕ್ಕುಳಿ – ಮೈಗಳ್ಳತನ

ತ

ತಗಲು – ಸೋಂಕು,ಮುಟ್ಟು
ತತ್ತರಿಸು – ನಡುಗು,ತಡವರಿಸು
ತಪಸ್ವಿ – ತಾಪಸಿ,ತಪಸ್ಸನ್ನು ಮಾಡುವವನು. ಋಷಿ
ತಯಾರಿ – ಸಿದ್ಧತೆ, ಸಜ್ಜು
ತಲೆದೂಗು – ತಲೆಯನ್ನು ಅತ್ತ ಇತ್ತ ಅಲುಗಾಡಿಸು.
ತಕ್ಷಣ – ಕೂಡಲೆ
ತಾಯಿ – ಜನನಿ,ಹಡೆದವಳು
ತಾರಸಿ – ಗಾರೆ-ಇಟ್ಟಿಗೆಗಳಿಂದ ಮಾಡಿದ ಮನೆಯ ಛಾವಣಿ.
ತಾರೆ – ನಕ್ಷತ್ರ, ಚಿಕ್ಕೆ
ತಾಳೆ – ಹೊಂದಾಣಿಕೆ,ಒಂದು ಜಾತಿಮರ.
ತ್ಯಾಜ್ಯ – ನಿರುಪಯುಕ್ತ
ತಿರಂಗಿ – ಮೂರು ಬಣ್ಣ
ತಿರುಳು – ಸಾರ, ಸತ್ವ
ತಿಳಿವು – ಸಮಾಧಾನ, ತಿಳುವಳಿಕೆ
ತೀರ – ದಡ
ತೀರು – ಅಂತ್ಯಗೊಳ್ಳು.
ತಿಂಗಳು – ಚಂದ್ರ, ೩೦ ದಿನಗಳ ಕಾಲಾವಧಿ.
ತುಕುಡಿ – ತುಂಡು, ಸೈನ್ಯದ ಒಂದು ಭಾಗ
ತೆಂಗು – ತೆಂಗಿನ ಮರದ ಕಾಯಿ

ತೇಲು – ನೀರಿನಲ್ಲಿ ಮುಳುಗುದಂತೆ ಇರು.
ತೊಳೆ – ಸ್ವಚ್ಛ ಮಾಡು
ತೋರು – ಕಾಣಿಸಿಕೊ

## ದ

ದವಸಧಾನ್ಯ – ಕಾಳು–ಕಡಿ
ದಾಟು – ಮೀರು
ದಾಳಿ – ಮುತ್ತಿಗೆ
ದಿಕ್ಸೂಚಿ – ದಿಕ್ಕನ್ನು ತೋರಿಸುವ ಯಂತ್ರ
ದಿನಾಂಕ – ತಾರೀಖು, ತೇದಿ
ದೀಪ – ದೀವಿಗೆ, ಸೊಡರು
ದೀನ – ಬಡವ
ದುಂಬಾಲು – ಬೆನ್ನುಹತ್ತು, ಯಾಚಿಸು
ದ್ರೋಹ – ಕೇಡುಬಗೆ, ವಿಶ್ವಾಸಘಾತ

## ಧ

ಧನ್ಯವಾದ – ಕೃತಜ್ಞತೆ
ಧ್ವನಿ – ದನಿ, ಕಂಠ

## ನ

ನರ್ತನ – ನಾಟ್ಯ, ನೃತ್ಯ
ನದಿ – ಹೊಳೆ
ನದಿದಂಡೆ – ಹೊಳೆ ತೀರ
ನನ್ನಿ – ಪ್ರೀತಿ, ನಿಜ, ದಿಟ
ನಭ – ಆಕಾಶ, ಗಗನ
ನಮಸ್ಕಾರ – ನಮನ
ನಯನ – ಕಣ್ಣು
ನಂತರ – ತರುವಾಯ, ಆಮೇಲೆ
ನಾಟ್ಯ – ನರ್ತನ, ಕುಣಿತ
ನಿನಾದ – ನಾದ, ಧ್ವನಿ
ನಿಗದಿ – ನಿಶ್ಚಯ
ನಿರಾಕರಿಸು – ತಿರಸ್ಕರಿಸು
ನಿರಾಶೆ – ಆಸೆಯನ್ನು ಕಳೆದುಕೊಳ್ಳುವುದು.
ನಿರ್ಧಾರ – ನಿರ್ಣಯ
ನಿಶ್ಶಬ್ದ – ಮೌನ, ಸದ್ದಿಲ್ಲದಿರುವಿಕೆ.
ನಿಷೇಧ – ವಿರೋಧ, ನಿರಾಕರಣೆ.
ನುಡಿ – ಮಾತು
ನೆತ್ತರು – ರಕ್ತ
ನೇರ – ನೆಟ್ಟಗಿರುವುದು.
ನೇವರಿಸು – ಸವರು,ತಡವು
ನೋಟ – ನೋಡುವಿಕೆ, ದೃಶ್ಯ.
ನೋವು – ಶೂಲೆ, ಬೇನೆ.

## ಪ

ಪತ್ರಿಕೆ – ನಿಯತಕಾಲಿಕೆ
ಪರದೇಶ – ವಿದೇಶ
ಪರಾಭವ – ಸೋಲು, ಅಪಜಯ.
ಪರಿವು – ಜ್ಞಾನ
ಪರಿಶ್ರಮ – ಬಳಲಿಕೆ, ಆಯಾಸ
ಪರಿಣಿತ – ಕುಶಲತೆ ಹೊಂದಿದ
ಪರಿಚಯ – ಗುರುತು
ಪವಿತ್ರ – ಶುಚಿಯಾದುದು, ಪುಣ್ಯಕರವಾದ.

ಪರೀಕ್ಷೆ – ಪರಿಶೀಲನೆ

ಪ್ರಕಟಿಸು – ಬಹಿರಂಗಪಡಿಸು

ಪ್ರಗತಿ – ಏಳಿಗೆ, ಮುನ್ನಡೆ

ಪ್ರಚಾರ – ಹರಡುವಿಕೆ, ಚಲಾವಣೆ.

ಪ್ರತಿನಿಧಿ – ಒಬ್ಬವ್ಯಕ್ತಿಯ ಅಥವಾ ಒಂದು ಸಂಘದ ಪರವಾಗಿ ನೇಮಿಸಲ್ಪಟ್ಟವನು.

ಪ್ರತಿಭೆ – ಹೊಳಪು, ವಿಶೇಷ, ಪ್ರಜ್ಞೆ

ಪ್ರಜ್ಞೆ – ತಿಳುವಳಿಕೆ

ಪ್ರದೇಶ – ಜಾಗ, ಸ್ಥಳ

ಪ್ರತೀಕ – ಚಿಹ್ನೆ, ಗುರುತು

ಪ್ರತಿ – ಎದುರು, ವಿರುದ್ಧ

ಪ್ರಯೋಜನ – ಉಪಯೋಗ

ಪ್ರಥಮ – ಮೊದಲನೆಯ, ಪ್ರಧಾನ

ಪ್ರಸಿದ್ಧ – ಖ್ಯಾತ, ಹೆಸರಾದ

ಪಾದ – ಅಡಿ, ಪದ್ಯದ ಒಂದು ಸಾಲು

ಪಾರಾಗು – ದಾಟು

ಪಾಲಕ – ಕಾಪಾಡುವವನು

ಪಾಲ್ಗೊಳ್ಳು – ಭಾಗವಹಿಸು

ಪ್ರಾಚೀನ – ಹಿಂದಿನ ಕಾಲ

ಪ್ರಾಣಿ – ಪ್ರಾಣವುಳ್ಳದ್ದು, ಜೀವ ಜಂತು.

ಪ್ರಾಂತ್ಯ – ದೇಶದ ಒಂದು ಭಾಗ.

ಪ್ರಾಥಮಿಕ – ಮೊದಲನೆಯ

ಪ್ರೀತಿ – ಅನುರಾಗ

ಪುಕ್ಕ – ಹಕ್ಕಿಗಳ ಹಿಂಬದಿಯ ಗರಿ

ಪುಟ್ಟ – ಸಣ್ಣ, ಕಿರಿಯ

ಪುಳಕ – ರೋಮಾಂಚನ

ಪುರಾತನ – ಹಳೆಯ ಕಾಲದ

ಪೂಜೆ – ಅರ್ಚನೆ, ಆರಾಧನೆ.

ಪೂರೈಕೆ – ಒದಗಿಸುವಿಕೆ.

ಪೂರೈಸು – ಒದಗಿಸಿಕೊಡು, ಮುಗಿಸು.

### ಫ

ಫಸಲು – ಬೆಳೆ, ಪೈರು

ಫಲವತ್ತಾದ – ಸಾರವತ್ತಾದ, ಸತ್ವವುಳ್ಳ

### ಬ

ಬಂಗಾರ – ಹೊನ್ನು, ಚಿನ್ನ

ಬಂಧು – ನೆಂಟ, ಸಂಬಂಧಿಕ

ಬದ್ಧ – ನಿಯಮಕ್ಕೆ ಒಳಪಟ್ಟ

ಬಲಿದಾನ – ಆಹುತಿಕೊಡು

ಬಲೆ – ಜಾಲ, ಪ್ರಾಣಿ, ಪಕ್ಷಿಗಳನ್ನು ಹಿಡಿಯುವ ಸಾಧನ.

ಬಯಲು – ಮೈದಾನ, ವಿಸ್ತಾರವಾದ ಜಾಗ.

ಬಳಿ – ಲೇಪಿಸು, ಸವರು, ಹತ್ತಿರ

ಬದುಕು – ಜೀವಿಸು

ಬಯಕೆ – ಆಸೆ, ಹಂಬಲ

ಬಳುಕು – ನಡುಗು, ಕಂಪಿಸು

ಬಕ್ಷೀಸು – ಬಹುಮಾನ

ಬಾಂಧವ್ಯ – ನೆಂಟಸ್ತಿಕೆ

ಬಾಡು – ಕುಗ್ಗು, ಸೊರಗು

ಬಾನು – ಆಕಾಶ, ಆಗಸ, ಗಗನ

ಬಾರಿ – ಸರದಿ, ಸಲ
ಬಾಲಕ – ಹುಡುಗ
ಬಾಳೆ – ಬಾಳೆಗಿಡ, ಒಂದು ಜಾತಿಯ ಮೀನು.
ಬಿಸಲು – ಸೂರ್ಯನ ಕಾವು
ಬಿಲ್ಲು – ಧನಸ್ಸು
ಬೀಡು – ತಂಗುವ ಸ್ಥಳ
ಬೀಸಣಿಕೆ – ಗಾಳಿ ಬೀಸಿಕೊಳ್ಳುವ ಸಾಧನ.
ಬೆಣಚುಕಲ್ಲು – ಹೊಳಪುಳ್ಳ ಬಿಳಿಯ ಬಣ್ಣದ ಕಲ್ಲು
ಬೆನ್ನಟ್ಟು – ಹಿಂಬಾಲಿಸು, ಬೆನ್ನುಹತ್ತು
ಬೆದರಿಕೆ – ಹೆದರು, ಗಾಬರಿಯಾಗು
ಬೆರಗಾಗು – ಆಶ್ಚರ್ಯಪಡು
ಬೆಳಕು – ಪ್ರಕಾಶ, ಹೊಳಪು.
ಬೆಳ್ಳಿಚುಕ್ಕಿ – ಬೆಳ್ಳಿಯಂತೆ ಪ್ರಕಾಶ ಮಾನವಾಗಿ ಕಾಣುವ ಶುಕ್ರಗ್ರಹ.
ಬೇಡ – ಬೇಟೆಗಾರ.

## ಭ

ಭವನ – ಮನೆ
ಭವ್ಯತೆ – ವೈಭವ
ಭಾಗವಹಿಸು – ಪಾಲ್ಗೊಳ್ಳು
ಭಾಷೆ – ಮಾತು, ನುಡಿ
ಭಾವಾವೇಶ – ಚಿತ್ತವೃತ್ತಿಯ ತೀವ್ರತೆ
ಭೂಮಿ – ಜಗತ್ತು, ನೆಲ

## ಮ

ಮಂಕ – ಹೆಡ್ಡ, ತಿಳಿಗೇಡಿ
ಮಂಚ – ಪಲ್ಲಂಗ.
ಮಂದ – ದಡ್ಡ, ತಿಳಿಗೇಡಿ, ದಪ್ಪ
ಮಂತ್ರ – ದೇವತಾ ಸ್ತೋತ್ರ, ಶ್ಲೋಕ
ಮತ್ತೆ – ಪುನ:
ಮಣಿ – ಬಾಗು
ಮನದಟ್ಟು – ಮನಸ್ಸಿಗೆ ನಾಟು
ಮನನ – ವಿಚಾರ.
ಮಯೂರ – ನವಿಲು
ಮರಳು – ಹಿಂದಿರುಗು, ಉಸುಕು.
ಮನೋಹರ – ಸುಂದರವಾದ, ಸೊಗಸಾದ.
ಮನಸ್ಸು – ಚಿತ್ತ
ಮನೋಭಾವ – ಮನಸ್ಸಿನ ರೀತಿ.
ಮಲಿನ – ಕೊಳೆ, ಹೊಲಸು
ಮಳಲು – ಉಸುಕು
ಮಹತ್ವ – ಹಿರಿಮೆ
ಮಾಧ್ಯಮ – ಮಧ್ಯವರ್ತಿ, ಸಾಧನ
ಮಾಡು – ರಚಿಸು, ತಯಾರಿಸು.
ಮಹಡಿ – ಉಪ್ಪರಿಗೆ
ಮಾನ್ಯ – ಗೌರವಸ್ಥ
ಮಾತೃಶ್ರೀ – ತಾಯಿ
ಮಾರಣಾಂತಿಕ – ಮರಣವನ್ನು ಉಂಟು ಮಾಡುವ
ಮಾಲಿನ್ಯ – ಕೊಳೆ, ಹೊಲಸು
ಮಿತ್ರ – ಸ್ನೇಹಿತ
ಮಿತಿ – ಅಳತೆ, ಪ್ರಮಾಣ

ಮಿಶ್ರ – ಸೇರಿಸಿದ, ಬೆರಸಿದ
ಮಿಶ್ರಿತ – ಸೇರಿಸಲಾದ, ಬೆರಸಲಾದ
ಮೀರಿಸು – ದಾಟು, ಅಲ್ಲಾಡಿಸು
ಮಿಂಚು – ಹೊಳೆ, ಪ್ರಕಾಶಿಸು
ಮುಖ – ಮೋರೆ, ಬಾಯಿ
ಮುಗಿಲು – ಮೋಡ, ಆಕಾಶ
ಮುನ್ನಡೆ – ಏಳಿಗೆ, ಪ್ರಗತಿ
ಮುರಳಿ – ಕೊಳಲು
ಮುಂಗೋಳಿ – ನಸುಕಿನಲ್ಲಿ ಕೂಗುವ ಕೋಳಿ
ಮೂಡಣ – ಸೂರ್ಯ ಉದಯಿಸುವ ದಿಕ್ಕು, ಪೂರ್ವ
ಮೂಡು – ಹುಟ್ಟು,ಉದಯಿಸು
ಮೆತ್ತು – ಬಳಿ, ಲೇಪಿಸು
ಮೈದಾನ – ಸಮತಟ್ಟಾದ ನೆಲ
ಮೊನ್ನೆ – ನಿನ್ನೆಯ ಹಿಂದಿನ ದಿನ
ಮೋಹನ – ಆಕರ್ಷಕವಾದ
ಮೌನ – ಮಾತನಾಡುದಿರುವಿಕೆ

**ಯ**

ಯುದ್ಧ – ಕದನ, ಹೋರಾಟ
ಯೋಚನೆ – ವಿಚಾರ
ಯೋಜನೆ – ಏರ್ಪಾಟು, ವ್ಯವಸ್ಥೆ

**ರ**

ರಂಜನೆ – ಸಂತೋಷಗೊಳಿಸು
ರಂಗಸ್ಥಳ – ರಂಗಮಂಟಪ
ರಂಗು – ಬಣ್ಣ
ರಚನೆ – ನಿರ್ಮಿಸು, ಕಟ್ಟು
ರಜೆ – ವಿರಾಮ, ಅವಕಾಶ
ರಥ – ತೇರು
ರಭಸ – ವೇಗ
ರಸಗಟ್ಟು – ಸಾರ ಸಂಗ್ರಹವಾಗು
ರಕ್ಷಣೆ – ಕಾಪಾಡುವಿಕೆ
ರಾಷ್ಟ್ರ – ಒಂದು ಆಡಳಿತಕ್ಕೆ ಒಳಪಟ್ಟ ಪ್ರದೇಶ
ರಾಸಾಯನಿಕ ರಾಸಾಯನ ಪ್ರಕ್ರಿಯೆಯಲ್ಲಿ ಬಳಸುವ ವಸ್ತು
ರುಂಡ – ತಲೆ, ತಲೆಬುರಡೆ
ರೂಪ – ಚೆಲುವು, ಅಂದ
ರೆಕ್ಕೆ – ಗರಿ
ರೇಖೆ – ಗೆರೆ, ಗೀಟು
ರೈತ – ಬೇಸಾಯ ಮಾಡುವವನು
ರೋಮಾಂಚನ – ಪುಳಕ, ನವಿರೇಳುವಿಕೆ

**ಲ**

ಲಕ್ಷ್ಮೀಪೂಜೆ – ಸಂಪತ್ತಿನ ಪೂಜೆ
ಲಾಲಿ – ಮಕ್ಕಳನ್ನು ಮಲಗಿಸುವಾಗ ಹಾಡುವ ಹಾಡು.
ಲಾವಣ್ಯ – ಸೊಗಸು, ಅಂದ
ಲೀಲೆ – ಆಟ, ವಿನೋದ
ಲೇಖನ – ಬರವಣಿಗೆ

**ವ**

ವಂದನೆ – ನಮಸ್ಕಾರ
ವಂದಿಸು – ನಮಸ್ಕರಿಸು
ವರ್ಗ – ತರಗತಿ, ಒಂದೆ ಬಗೆಯ ಗುಂಪು
ವಠಾರ – ಕೆಲವು ಮನೆಗಳ ಆವಾರ
ವನಿತೆ – ಹೆಂಗಸು
ವರುಷ – ವರ್ಷ, ೧೨ ತಿಂಗಳ ಕಾಲಾವಧಿ.
ವ್ಯರ್ಥ – ನಿರುಪಯುಕ್ತ

ವರ್ಣ – ಬಣ್ಣ
ವಾಕ್ಯ – ಮಾತು, ನುಡಿ
ವಾತಾವರಣ – ಗಾಳಿಯಿಂದ ಕೂಡಿದ ಪ್ರದೇಶ
ವಾಹನ – ಬಂಡಿ ರೈಲು
ವ್ಯಾಕರಣ – ಭಾಷೆಯ ನಿಯಮಗಳನ್ನು ತಿಳಿಸುವ ಶಾಸ್ತ್ರ
ವಿಚಾರ – ವಿಷಯ, ಪ್ರಸ್ತಾಪ
ವಿಧೇಯ – ಆಜ್ಞೆ ಪಾಲಿಸುವವ
ವಿಭಾಗ – ವಿಂಗಡಿಸು, ಭಾಗಮಾಡು
ವಿದ್ಯಾರ್ಥಿ – ವಿದ್ಯೆಯನ್ನು ಕಲಿಯ ಬಯಸುವವ.
ವಿದ್ಯಾದಾನ – ವಿದ್ಯೆಯನ್ನು ಕಲಿಸು
ವಿದ್ಯಾವಂತ – ಕಲಿತವ
ವಿಧವೆ – ಗಂಡಸತ್ತ ಹೆಂಗಸು
ವಿನೀತ – ಒಳ್ಳೆಯ ಸ್ವಭಾವ
ವಿರಾಮ – ವಿಶ್ರಾಂತಿ, ಬಿಡುವು
ವಿಶೇಷ – ಹೆಚ್ಚಿನ ಗುಣ
ವಿಷಯ – ಬಯಕೆಯ ವಸ್ತು
ವಿಲೀನ – ಕರಗಿದ, ಮುಳುಗಿದ
ವೆಚ್ಚ – ಖರ್ಚು
ವೇಷ – ಉಡುಗೆ
ವೈರಿ – ಹಗೆ, ಶತ್ರು
ವೈದ್ಯ – ಔಷಧ–ಪಂಡಿತ, ಡಾಕ್ಟರ್

**ಶ**

ಶತಮಾನ – ನೂರು ವರ್ಷಗಳ ಅವಧಿ
ಶತ್ರು – ವೈರಿ
ಶಾಲೆ – ಪಾಠಶಾಲೆ ಸ್ಕೂಲು
ಶಾಸ್ತ್ರ – ಸಂಪ್ರದಾಯ, ನಿಯಮ
ಶಿಖಿ – ತುದಿ,ಜುಟ್ಟು
ಶಿಬಿರ – ಸೈನ್ಯಬೀಡು ಬಿಡುವ ಸ್ಥಳ
ಶಿಷ್ಯ – ವಿದ್ಯಾರ್ಥಿ
ಶ್ರೀ – ಲಕ್ಷ್ಮಿ, ಸಿರಿ
ಶುದ್ಧಿ – ಸ್ವಚ್ಛತೆ
ಶುಲ್ಕ – ಸುಂಕ, ತೆರಿಗೆ, ಗುರುದಕ್ಷಿಣೆ
ಶುಭ – ಚೆಲುವಾದ,ಕ್ಷೇಮ
ಶೃಂಗಾರ – ಅಲಂಕಾರ
ಶೈಕ್ಷಣಿಕ – ಶಿಕ್ಷಣಕ್ಕೆ ಸಂಬಂಧಿಸಿದ
ಶೋಷಣೆ – ಪೀಡಿಸು, ಸತಾಯಿಸು.

**ಷ**

ಷಣ್ಮುಖ – ಆರು ಮುಖವುಳ್ಳ, ಶಿವನ ಮಗ
ಷಷ್ಠಿ – ಪಕ್ಷದ ಆರನೆಯ ದಿವಸ

**ಸ**

ಸರ್ಕಾರ – ರಾಷ್ಟ್ರ, ರಾಜ್ಯವನ್ನು ಆಳುವ ವ್ಯವಸ್ಥೆ
ಸಗ್ಗ – ಸ್ವರ್ಗ
ಸಡಗರ – ಉತ್ಸಾಹ
ಸಣ್ಣಗೆ – ಕೃಶವಾಗಿ, ಸ್ವಲ್ಪ
ಸತತ – ನಿರಂತರ
ಸತ್ಯಾಗ್ರಹ – ನ್ಯಾಯಕ್ಕಾಗಿ ಒತ್ತಾಯ ಪಡಿಸುವುದು.
ಸಪ್ಪುಳ – ಸದ್ದು

ಸಮಯ – ಕಾಲ
ಸಮನ್ವಯ – ಹೊಂದಿಕೆ, ಹೊಂದಾಣಿಕೆ
ಸಮಾರಂಭ – ಉತ್ಸವ
ಸರಿರಾತ್ರಿ – ಮಧ್ಯರಾತ್ರಿ
ಸಲಹು – ಕಾಪಾಡು, ರಕ್ಷಿಸು
ಸವಿ – ತಿನ್ನು, ರುಚಿ
ಸಹಸ್ರಾಕ್ಷ – ಇಂದ್ರ, ಸಾವಿರ ಕಣ್ಣುಳ್ಳವ.
ಸಹಾಯ – ನೆರವು
ಸಂಕೇತ – ಸೂಚನೆ
ಸಂತ – ಸಾಧು
ಸಂತಸ – ಸಂತೋಷ
ಸಂಭ್ರಮ – ಸಡಗರ
ಸ್ವತಂತ್ರ – ಪರಾಧೀನವಲ್ಲದ
ಸ್ವಚ್ಛ – ಶುಭ್ರ, ನಿರ್ಮಲ
ಸಾಗರ – ಕಡಲು, ಸಮುದ್ರ
ಸಾಧನೆ – ಪರಿಶ್ರಮ
ಸಾಮ್ರಾಜ್ಯ – ಚಕ್ರವರ್ತಿಯ ರಾಜ್ಯ
ಸಾರು – ಘೋಷಿಸು
ಸಾವು – ಮರಣ
ಸಾಹಸ – ಪರಾಕ್ರಮ
ಸ್ನಾನ – ಜಳಕ
ಸ್ವಾಗತ – ಸಂತೋಷದಿಂದ ಬರಮಾಡಿಕೊಳ್ಳುವಿಕೆ
ಸಿದ್ಧತೆ – ಸಜ್ಜು, ತಯಾರಿ
ಸಿಡಿಲು – ಮಳೆಗಾಲದಲ್ಲಿ ಆಕಾಶದಿಂದ ಭೂಮಿಯ ಕಡೆಗೆ ಹರಿದು ಬರುವ ವಿದ್ಯುತ್ ಪ್ರವಾಹ
ಸಿಪಾಯಿ – ಸೈನಿಕ

ಸೀಮೆ – ಗಡಿಕಲ್ಲು, ಎಲ್ಲೆ
ಸಿಂಗಾರ – ಶೃಂಗಾರ
ಸಿಂಪಡಿಸು – ಚಿಮುಕಿಸು
ಸ್ವೀಕರಿಸು – ಅಂಗೀಕರಿಸು, ತೆಗೆದುಕೊಳ್ಳು
ಸುಡು – ದಹಿಸು
ಸುಖ – ನೆಮ್ಮದಿ
ಸುತ್ತಮುತ್ತಲು – ಅಕ್ಕ, ಪಕ್ಕ.
ಸುರಿ – ಸೋರು, ಹರಿ
ಸುಳಿ – ಜಲಾವರ್ತ, ಸುತ್ತು
ಸುಳಿವು – ಸುಳುಹು, ಜಾಡು, ಕುರುಹು
ಸೃಷ್ಟಿ – ಜಗತ್ತು, ಪ್ರಕೃತಿ.
ಸೆಳೆ – ಎಳೆಯುವಿಕೆ, ಆಕರ್ಷಿಸು
ಸೊಸೆ – ಮಗನ ಹೆಂಡತಿ
ಸೋಂಕು – ತಾಗು, ಸ್ಪರ್ಶಿಸು
ಸೌಂದರ್ಯ – ಚೆಲವು, ಸೊಬಗು.

## ಹ

ಹಕ್ಕಿ – ಪಕ್ಷಿ
ಹಚ್ಚ ಹಸಿರು – ದಟ್ಟ ಹಸಿರು
ಹಟ – ಮೊಂಡುತನ
ಹಪ್ತೆ – ಭೂಕಂದಾಯ.
ಹಬ್ಬು – ಪಸರಿಸು, ಹರಡು
ಹರಡು – ಪಸರಿಸು, ಹಬ್ಬು
ಹರಸು – ಆಶೀರ್ವದಿಸು
ಹಲವಾರು – ಅನೇಕ
ಹಸು – ಆಕಳು

ಹಳ್ಳಕೊಳ್ಳ – ತಗ್ಗು–ಕುಣಿ

ಹಂತ – ಮೆಟ್ಟಿಲು, ಘಟ್ಟ, ಮಟ್ಟ

ಹಾರೈಕೆ – ಅಪೇಕ್ಷೆ, ಹಂಬಲ

ಹಾಲ್ದೆನೆ – ರಸ ತುಂಬಿದ ತೆನೆ

ಹಿಗ್ಗು – ಸಂತೋಷ, ಹೆಮ್ಮೆ

ಹಿಡಿಸು – ತೊಡಗು, ಪ್ರಾರಂಭಿಸು

ಹಿನ್ನೆಲೆ – ಹಿಂದಿನ ಸನ್ನಿವೇಶ

ಹಿಂಡು – ಗುಂಪು, ತಿರುಚು

ಹಿಂಸೆ – ಕೇಡು, ಹಾನಿ

ಹುಲ್ಲುಗಾವಲು – ಹುಲ್ಲಿನ ಮೈದಾನ

ಹುರಿದುಂಬಿಸು – ಉತ್ಸಾಹ ಗೊಳಿಸು

ಹೂಬಾಣ – ಹೂವುಗಳಿಂದ ಮಾಡಿದ ಬಾಣ.

ಹೆಣಗಾಡು – ಹೋರಾಡು, ಶ್ರಮಪಡು

ಹೆಮ್ಮೆ – ಅಭಿಮಾನ

ಹೇರು – ಭಾರ, ಹೊರಿಸು

ಹೊಗಳು – ವರ್ಣಿಸು

ಹೊರಸಂಚಾರ – ವಾಯುವಿಹಾರ

ಹೊರ ಹೊಮ್ಮು – ಹೊರಕ್ಕೆ ಬರು

ಹೊಳಪು – ಪ್ರಕಾಶ, ಕಾಂತಿ.

ಹೊಳೆ – ಗೋಚರಿಸು

ಹೊಂಬಣ್ಣ – ಬಂಗಾರದ ಬಣ್ಣ

ಹೋರಾಟ – ಜಗಳ, ಕದನ

## ನುಡಿ ಗಟ್ಟು

ಅಂಗಲಾಚು – ಬೇಡು, ಮೊರೆಯಿಡು

ಎತ್ತಿಕಟ್ಟು – ಪ್ರಚೋದಿಸು

ಎದೆಗುಂದು – ಧೈರ್ಯಗೆಡು

ಕಣ್ಣು ತಪ್ಪಿಸು – ಪಾರಾಗು

ಕಣ್ಮುಚ್ಚು – ಸಾಯು

ಕಥೆ ಕಟ್ಟು – ಸುಳ್ಳು ಹೇಳು

ಕಷ್ಟಕೋಟಲೆ – ಕಷ್ಟ–ನಷ್ಟಗಳು

ತಳಿರು ತೋರಣ – ಮಾವಿನ ಎಲೆಯ ತೋರಣ, ಸಿಂಗಾರ

ದಂಗಾಗು – ಅಚ್ಚರಿ ಪಡು.

ದಿಕ್ಕು ತೋರದಾಗು – ಏನೂ ತಿಳಿಯದಂತಾಗು

ದಿಕ್ಸೂಚಿ – ಮಾರ್ಗದರ್ಶಿ

ದಿಕ್ಕೆಟ್ಟು – ಏನೂ ಕಾಣದಂತಾಗಿ

ಪುಡಿಪುಡಿಯಾಗು – ಚೂರಾಗು, ನಾಶವಾಗು

ಬಿರುಮಳೆ – ಚಂಡಮಾರುತ ಮಳೆ

ಭವಿಷ್ಯ ಬಿದ್ದು ಹೋಗು – ನಷ್ಟವಾಗು, ಭವಿಷ್ಯವಿಲ್ಲದಂತಾಗು.

ಮೂಕ ಪ್ರೇಕ್ಷಕ – ಅನ್ಯಾಯವನ್ನು ಕಂಡು ಸುಮ್ಮನಿರುವುದು

ಸಿಡಿದೇಳು – ಸಿಟ್ಟಿಗೇಳು

ಹೌಹಾರು – ಎದೆಗುಂದು

ಹಂಚಿಕೆ ಹೂಡು – ಉಪಾಯ ಮಾಡು



